ಕರ್ಣಾಟಕ ಕಾವ್ಯಮಂಜರಿ

# ಮಹಾಕವಿ
# ಕವಿರಾಜಕುಂಜರಾಭಿದ
# ನೇಮಿಚಂದ್ರ
ವಿರಚಿತಂ
# ಲೀಲಾವತೀಪ್ರಬಂಧಂ

ಪ್ರಥಮ ಸಂಪುಟಂ— ಅಧ್ಯಾಯಂ ೧–೬

[೨೧]

ಎಸ್ ಜಿ. ನರಸಿಂಹಾಚಾರ್,
ಲೈಬ್ರೇರಿಯನ್ ಮೈಸೂರು ಗೌರ್ನಮೆಂಟ ಓರಿಯಂಟಲ್ ಲೈಬ್ರರಿ,
ಮ. ಅ. ರಾಮಾನುಜೈಯಂಗಾರ್
ಅಸಿಸ್ಟೆಂಟ ಮಾಸ್ಟರ್ ವೆಸ್ಲಿಯನ್ ಮಿಷನ್ ಹೈಸ್ಕೂಲ್, ಮೈಸೂರು
ಇವರಿಂದ ಪರಿಷ್ಕರಿಸಲ್ಪಟ್ಟು

ಕರ್ಣಾಟಕ ಕಾವ್ಯಮಂಜರಿ ಪ್ರೊಪ್ರೈಟರುಗಳಿಗಾಗಿ,
ಮೈಸೂರು:
ಸ್ಟಾರ್ ಪ್ರೆಸ್ಸಿನಲ್ಲಿ ಮುದ್ರಿಸಲ್ಪಟ್ಟಿತು
೧೮೯೮

[ಕ್ರಯ ೧-೩-೦

# ಕವಿರಾಜಕುಂಜರ ವಿರಚಿತಂ

# ಲೀಲಾವತಿ.

---

## ಪ್ರ ಥ ಮಾ ಶ್ವಾ ಸಂ.

ಶ್ರೀಪಾದಾಕ್ರಾಂತಲೋಕಂ ಪರಮಹಿಮಕರಂ ನೂತನಕ್ಷತ್ರಕಾಂತಂ ।
ತಾಪಧ್ವಾಂತಾಪನೋದಕ್ಷಮನಮೃತಕಲಾವಲ್ಲಭಂ ವಿಶ್ವವಿದ್ಯಾ॥
ಕೂಪಾರೋಜ್ಜೀವಜೈವಾತೃಕನತನು[1]ಕೃತಸ್ವಾಂತ[1]ಸೌಖ್ಯಂ ತ್ರಿಲೋಕೀ ।
ದೀಪಂ ತಳ್ಕೈಸುಗಸ್ಮನ್ಮತಿಕುಮುದಿನಿಯಂ ನೇಮಿಚಂದ್ರಂ ಜಿನೇಂದ್ರಂ॥

ವಿಧುಕಾಂತಂ ಕಾಮದಂ ಪ್ರೋದ್ಧತಮಕರಪತಾಕಂ ನತಭ್ರೂಲತಾಪು ।
ಷ್ಪಧನುರ್ಲೇಖಂ ಮನೋಲಕ್ಷ್ಯಕಮಸೃಣಗರಸ್ಮೇರನೇತ್ರಪ್ರಸೂನಾ ॥
ಯುಧನುದ್ಯದ್ಭಾರತೀಶಂ ಕುಡುಗೆಮಗಮೃತಶ್ರೀಸನುತ್ಕಂಠೆಯಂ ಸ ।
ನ್ಮಧುರಾಜಶ್ರೀಮನೋಜ್ಞಂ ಜಿನವದನಮಯಂ ಮಾನ್ಮಥಂ ದಿವ್ಯರೂಪಂ ॥

ಆಯುತದಿವ್ಯಮೂರ್ತಿ ಶಿವಸೌಖ್ಯಕರಂ ಪರಿಪೂಜ್ಯನೂರ್ಜಿತ ।
ಶ್ರೀಯುವತೀಶ್ವರಂ ಮಧುವಿರುದ್ಧವಿಭೂತಿ ವಿಯೋಗಿಚಿತ್ತಮಂ ॥
ನೋಯಿಸದೊಂದಿ ನಿಂದ ರತಿರಾಗಮನಾಗಿಸದತ್ಯಪೂರ್ವಪು ।
ಷ್ಪಾಯುಧನೀವನಕ್ಕೆಮಗೆ ಶಾಂತಿಜನಂ ವೃಜಿನೈಕಶಾಂತಿಯಂ ॥೩॥

ಬೞಲದೆ ಪುಷ್ಪಬಾಣಹತಿಯಿಂ ಪುಳಕಂಗಳನಾನದುಣ್ಮಿ ನಾ ।
ಣಱಿಯದೆ ಜಾಣನಿಕ್ಕದೆ ಬೆಮ[2]ರ್ತಜು[2]ತಾಱದೆ ತೀರ್ದ ತಾನೆ ಮೆ ॥
ಯ್ಯಱಲೆ ಕಡಂಗಿ ಮುಕ್ತಿಯೊಡಗೂಡಿದ ಪೆಂಪಿನ ಸೌಖ್ಯದಿಂಪು ಪೊಂ ।
ಪುಱಯೆನಿಸಿರ್ದ ಸಿದ್ಧರೆಮಗೀಗೆ ವಿಶುದ್ಧರಭೀಷ್ಟಸಿದ್ಧಿಯಂ ॥೪॥

---

ಪಾಠಾಂತರ— 1. ತಾಶ್ರಾಂತ. ಕ॥ 2. ರ್ತೆಱ. ಗ ॥

ಜಿನಪದಬೋಧವಾರ್ಧಿಭವೆ ಭವ್ಯಮನೋಹ[1]ರ[1]ಕಾಂತೆ ಕಾಮಸಂ ।
ಜನನಿ ಯಶೋವಿಕಾಸಿನಿ ಗುಣೀಕೃತಸಂಸ್ಕೃತಿದೋಷೆ ಪುಣ್ಯಭಾ ॥
ಗಿನಿ ಭುವನ[3]ಪ್ರಬೋ[2]ಧಿನಿ ಸುಖಾವೃತದಾಯಿನಿ ಬಂದು ನೇಮಿಚಂ ।
ದ್ರನ ಮುಖಪದ್ಮದೊಳ್ ಸಿರಿವೋಲಿರ್ಪ ಸರಸ್ವತಿ ನಿಲ್ಕೆ ನಲ್ಮೆಯಿಂ ॥೫॥

ಬಱದೆ ಮರಲ್ದರಲ್ದ ಕುಕವಿವ್ರಜಶಾಲ್ಮಲಿಯಂ ಮಲಂಗದೆ ।
ಟ್ಟಿಱಿಸದೆ ದುರ್ವಿವೇಕಮುಖಕುಟ್ಮಲದಿಂದವಗಂಧಮಂ ಮರು ॥
ಳ್ದೆಱಗದೆ ಮುಗ್ಧಚಂಪಕದೊಳೋಲ್ದು ಸರಸ್ವತಿಯೆಂಬ ತುಂಬಿ ಬಂ ।
ದೆಱಗುಗೆ ನೇಮಿಚಂದ್ರನ ನವಸ್ಮಿತಜಾತಮುಖಾಂಬುಜಾತದೊಳ್ ॥೬॥

ಎನಗೆ ಸಮಂತಭದ್ರನೆ ಕವೀಶ್ವರರೊಳ್ ಸಕಲಾಕಲಂಕದೇ ।
ವನೆ ವರವಾದವಿದ್ಯರೊಳಶೇಷವಿಶೇಷಕಪೂಜ್ಯಪೂಜ್ಯಪಾ ॥
ದನೆ ಪದವಾಕ್ಯಕೋವಿದರೊಳತ್ಯಭಿ[3]ನೂತನರನ್ನರಪ್ಪ ಮ ।
ತ್ತಿನ ಕವಿವಾದಿಶಾಬ್ದಿಕರೊಳಾರ್ಗೆನಿತುಳ್ಳೊಡಮಚ್ಚಿಯುಳ್ಳೊಡಂ ॥೭॥

ಪಾಪಶುಭೋದಯಮಂ ವಾ ।
ಗ್ವ್ಯಾಪಾರದಿನನತನತರ್ಗೆ ಮಾಳ್ಪಂ ಸಹಜಂ ॥
ಕೋಪಪ್ರಸಾದಮೊಂದೊಡೆ ।
ಶಾಪಾನುಗ್ರಹಸಮರ್ಥರಲ್ಲರೆ ಕವಿಗಳ್ ॥ ॥೮॥

ಕಡುಗಱಿದಯಶಂ ಪೆಸರಿಡೆ ।
ಕಡುವಿಳಿದಾಯಿತ್ತು ಕೀರ್ತಿ ಕವಿಗಳ್ ಕಱದೆಂ ॥
ದೊಡೆ ಕಱಿದವರ್ಗಳ್ ಬಿಳಿದೆಂ ।
ದೊಡೆ ಬಿಳಿದೇಕವರನುಱದೆ ಕಿಡುವರ್ ಕೆಲಬರ್ ॥ ॥೯॥

ಸುಭಗಕವಿವೃಷಭಶುಭದ ।
ಸ್ವಭಾವಸರಸಪ್ರಬಂಧಬಂಧುರಗುಣಸಾ ॥
ರಭವಮಂ ಪ್ರೀತ್ತಿಸೆಗುವ ವಾ ।
ಗ್ವಿಭವಮುಮುಂಟಾದೊಡವನೆ ಸೇವ್ಯಂ ಜಗದೊಳ್ ॥ ॥೧೦॥

ಪಾ— 1. ರಿ. ಕ ॥ 2. ಪ್ರಮೋ. ಕ ॥ 3. ನೂತನನಂತ. ಖ ॥

ಕಟ್ಟುಗೆ ಕಟ್ಟಿದಿರ್ಕೆ ಕಡಲಂ ಕಪಿಸಂತತಿ ರಾಮನಕ್ರಮಂ ।
ಮುಟ್ಟುಗೆ ಮುಟ್ಟಿದಿರ್ಕೆ ಮುಗಿಲಂ ಹರನಂ ನರನಿಕ್ಕಿ ಗಂಟಲಂ ॥
ಮೆಟ್ಟುಗೆ ಮೆಟ್ಟಿದಿರ್ಕೆ ಕವಿಗಳ್ ಕೃತಿಬಂಧದೊಳತ್ತೆ ಕಟ್ಟಿದರ್ ।
ಮುಟ್ಟಿದರಿಕ್ಕಿ ಮೆಟ್ಟಿದರಿದೆಂಸಳವಗ್ಗಳವೋ ಕವೀಂದ್ರರಾ ॥ ॥೧೧॥

ಕವಿಯಿಂದೀಂಟಿಸುವರ್ ಸಮಸ್ತರಸಮಂ ತೋರ್ಪರ್ ಸರೋಜಾತಮಂ।
ಯುವತೀಪ್ರೌಢಲತಾಗ್ರದೊಳ್ ಕುಮುದಮೊಂದೊಂದಲ್ಲಿಯಾಬಾಲಪ ॥
ಲ್ಲವಮಂ ಪುಟ್ಟಿಪರಾರ್ಯಮೋಹನಮುಮಂ ಮಾಸ್ಪೀಚಮತ್ಕಾರಮಂ ।
ಕವಿಗಳ್ ಬಲ್ಲವೆಲನ್ಯರೆತ್ತಱಿವರಂತಾಬ್ರಹ್ಮನುಂ ಬಲ್ಲನೇ ॥ ॥೧೨॥

ಮರನಿಂಗುಂ ಮಣಿಯಾಗುಮೊಂದುಪಶುವೀಗುಂ ಕೇಳಿಮೊಂದೋಳಿಯೊಳ್।
ಪುರುಡಂ ಪುಟ್ಟಿಸಿ ಕಾಷ್ಠಮಂ ಕೊನರಿಪರ್ ಕಲ್ಲಲ್ಲಿ ನಾರೆತ್ತುವರ್ ।
ಮರುಳಂ ಪ್ರೋಪುರುಗಳಾಗಿಪರ್ ಕಿವಿಗಳೊಳ್ ಪೀಯೂಷಮಂ ಪಿಂಡಲು ।
ವಱರೆಯೊಳ್ ಸಂದ ಕವಿಪ್ರವೇಕರೆ ಪಲಂ ಬಲ್ಲರ್ ಪೆಱರ್ ಬಲ್ಲರೇ ॥೧೩॥

ನಿಶ್ಚಿತಮಿದೆನಗೆ ಸಕಲನ ।
ಚಶ್ಚತುರಜನೋಪದೇಶದಿಂ ಪಿಶುನವಚೋ ॥
ವೃಶ್ಚಿಕವಿಷಹರಮಖಿಳವಿ ।
ಪಶ್ಚಿನ್ನುತಿಮಂತ್ರಮೆಂಬುದಿನ್ನುಂ ಮುನ್ನುಂ ॥ ॥೧೪॥

ಕಾಯುಮಿರೆ ಮನಮನಂಗಜ ।
ಸಾಯಕಮುಚರ್ವವ್ರೋಲುಚರ್ದಿತರೇಷು ಕುಶಾ ॥
ಗ್ರೀಯಮತಿ ಕವಿಜನಾಭಿ !
ಪ್ರಾಯಮನಱಿವಂತೆ ಪೆಱನದೇನಱಿವಪನೇ ॥ ॥೧೫॥

ಅಧಮಕೃತಿವೇಣುವಿಪಳನ ।
ವಿಘುರಿತಮೆತ್ತಱಿಗುಮರಸವಿಬುಧಭ್ರಮರಂ ॥
ಬುಧವಿಧುವಿಕಸಿತಸುಕವಿ ।
ಪ್ರಧಾನಕೃತಿಕುಮುದಮಧುರಮಧುರಸದಿಂಪಂ ॥ ॥೧೬॥

ಕವಿಗಳ ಬಿಸುಟ್ಟ ಬಗೆಯುಂ ।
ತವಗುಂಟೆ ವಿದಗ್ಧಹೃದ್ಯಕಾವ್ಯವಿಚಾರ ॥
ಕ್ಕವಟವಿಸಿ ಗಂಟಲೊಡೆದೊಣ।
ಗುವಿನಂ ಬಾಯ್ಮಾಱ್ಪರೇಕೆ ಬೆಳ್ಳಕ್ಕರಿಗರ್ ॥ ॥೧೭॥

ಔಚಿತ್ಯವೇದಿ ವಿವಿಧಕ ।
ಲಾಚತುರನೆನಿಪ್ಪ ಕವಿಯು ಕಾವ್ಯಾರ್ಥಮದೇಂ ॥
ಗೋಚರಮೆ ಲೋಕಶಾಸ್ತ್ರವಿ।
ಲೋಚನಮಿಲ್ಲದ ನರಂಗೆ ವಸುಧಾತಳದೊಳ್ ॥ ॥೧೮॥

ಊದುವ ತಣ್ಣೆಲರುಂ ಶೀ ।
ತೋದಕಮುಮಸೇವ್ಯಮಲ್ತೆ ಹಿಮಸಮಯದೊಳಾ ॥
ರಾದರಿಪರುಚಿತವಱಿಯದ ।
ವೈದಿಕಕವಿಗಳ ಕವಿತ್ವಮಂ ವಸುಮತಿಯೊಳ್ ॥ ॥೧೯॥

ಸೃಕ್ವದಿನುಗೆ ನೊರೆ ದುಷ್ಕವಿ ।
ಶಾಕ್ವರನೇಂ ಮೊರೆದು ಮೊಲ್ಕನಿಱಿಯದೆ ಕಟುಕಂ ॥
ಶಕ್ವಣಿತಮಪರಿಮಿತಪರಿ ।
ಪಕ್ವತರೋದಾರಕಾವ್ಯಸಸ್ಯೋತ್ಕರಮಂ ॥ ॥೨೦॥

ಲೋಗರ ಬಗೆಗೊಂದಿನೊಳನು ।
ರಾಗಮನಾಗಿಸದೊಡೊಂದಿದಂಗೊಂದಿದೊಡೇಂ ॥
ದಾಗದು ಪೇಱಿಕ್ಕುಮೆ ಮೊಲೆ ।
ನಾಗಂ ಕಿವಿಗಿಪ್ರಡುವೀಱ್ವನಂ ಗಱಿಪಮದೇಂ ॥ ॥೨೧॥

ಅಸ್ತವ್ಯಸ್ತಂ ಪಗಮ ।
ಪ್ರಸ್ತುತಮತಿವಿಹಿತಮರ್ಥಮೆನೆ ದುಷ್ಕೃತಿಯಂ ॥
ವಿಸ್ತರಿಸಿ ಸಲೆ ಸುಜನಶಿ ।
ರಸ್ತೋದಮನೇಕೆ ಮಸಗಿ ಮಾಱ್ಪರೊ ಕೆಲಬರ್ ॥ ॥೨೨॥

ಮಿಗೆ ಪದಮಿಡಲಱಿಯದ ನಾ |
ಲಗೆವೆಟಿವರ್ ಸಲೆ ಸದರ್ಥಮಂ ಕಾಣದ ಪೋ ||
ಬಗೆಗುರುಡರ್ ಬಗೆವ್ರೊತೆ ಕ |
ಬ್ಬಿಗರಕ್ಕುಮೆ ಓದುಗೇಳದಕ್ಕರಗಿವುಡರ್ || ||೧೩||

ನೀರೊಳಗಣ ಪೇಣನಂತೆವ್ರಾ |
ಲಾರೆಟೆದೊಡಮುರುಳೆವರಿಮು ಪುರುಳಿಲ್ಲದಪಂ ||
ಕಾರದೊಳ್ ಬಾತು ಬಲ್ಮೆಗೆ |
ಹಾರೈಸುವರೇಕೆ ಬಯಕೆಗವಿಗಳ್ ಕೆಲಬರ್ || ||೧೪||

ಎಂಗುದನೆನುತಿರ್ಪರ್ ಗಿರಿ |
ಯಂಪದಿನತಿನಿಶಿತಸುಕವಿವಾಕ್ಕುಲಿಶಂ ಬೀ ||
ಟ್ಟಿಂದೊಡಮೆರ್ದೆ*ಯುಂ ಸೀಳ್ದೊಡ |
ಮೊಂದಕ್ಕರಮಿಲ್ಲೆ ನಿಪ್ಪ ಕಲ್ಲೆರ್ದೆ*ಗವಿಗಳ್ || ||೧೫||

ಆನುಂ ಬುಧರೊಡನೆ ನೃಪಾ |
ಸ್ಥಾನದೊಳ'ದರ್ಪ್ಪೆನೆಂದು'ಕುಕವಿಕದಂಬಂ ||
ಬಾನುದ್ದಮುಪ್ಪುದೇಕು |
ದ್ಯಾನದೊಳೊಡನಿರವೆ ಕಾಗೆಯುಂ ಕೋಗಿಲೆಯುಂ || ||೧೬||

ಏಪ್ರೊಟ್ಟುಮುಱಿಗುವೋ ವಿ |
ಸ್ಮಾಪಕವೋ ಕಾವ್ಯರಸವಿಶೇಷಕದೊಳ್ ದು ||
ಷ್ಟಾಪಶಗರ್ ಸುಕವಿಯಶೋ |
ದೀಪಾಂಕುರದಗ್ಧಕರ್ಣಕೋಟರಕುಟಿಗಳ್ || ||೧೭||

ಕಸವಂ ಕಿಟ್ಟಿಲ್ಲದೆ ಪೋಸ |
ಸಸಿಗಳ್ ಕೈಕೊಳ್ಳವೆತ್ತಿ ಕಳೆಯದೆ ಖಳತಾ ||
ಮಸಮಂ ಬೇರ್ವೆರಸಿಂ ಪಸ |
ರಿಸುಗುವೆ ಬುಧವಿಧುಗೆ ವಿಮಳಕೃತಿದೀಧಿತಿಗಳ್ || ||೧೮||

---

ಪಾ — 1. ರ್ಪಂ ದಲೆದು. ಖ||

ತಕ್ಕರನೆ ಮಚ್ಚಸಲೆಂದೆಸೆ ।
ವ್ರೊಕ್ಕೊಡೆ ಖಳರವವರಖಿದು ಕಳೆದಪರಿನಬಿಂ ॥
ಬಕ್ಕೆ ಮುಱಿಯಪ್ಪ ಮುಗಿಲಂ ।
[1]ಮೊ[1]ಕ್ಕನೆ ಪೋಗಿಸದೆ ಪವನನೆನಗೇಂ ನಿನಗೇಂ ॥ ॥೧೯॥

ಬಳಗಜಿಯರ್ ಪೊಗೆಗೆಚಿಯರ್ ।
ವಿಳಸತ್ಕೃತಿಯನೆ ತಗುಳ್ದು ದೂಷಿಸಲುಜ್ಜ್ಯಂ ॥
ಖಳಖಳರತಿಪ್ರಸಾರಿತ ।
ಗಳರಪ್ಪರ್ ಗಳತಲಜ್ಜರೇಂ ಗಳ ಗೆಯ್ಯರ್ ॥ ॥೨೦॥

ಆತಂಗೆ ನಮಸ್ಕಾರಮ ।
ಚಾತುರ್ಯಂ ರಾಜತತಿಗೆ ರಾಹುವ ವದನಂ ॥
ಶೀತಾಂಶುಗೆ ಕಾವ್ಯಮಣಿ ।
ಜ್ಯೋತಿಗೆ ದುರ್ಜನಪತಂಗಮಾವನಿನಾಯ್ತೋ ॥ ॥೨೧॥

ಕೇಳ್ ಕಡುಸುಕರ್ಪ ಕುಸಿವಪ್ರದೇ ।
ಳಸಿ ಗುಣಮೊಂದೊಡಮಮ ದೋಷಕ್ಕೊಮಾರ್ಪ ॥
ನೀರ್ಗಳಂ ನಿಮಿರ್ದ*ಪುದತಿವಾ ।
ಚಾಳರ ನಾಲಗೆಗೆ ಜಿಗುಚೆಯೇನಪ್ಪುದೊ ಪೇಳ್ ॥ ॥೨೨॥

ಪರಿಕಿಪೊಡೆ ಪಿಶುನನಗ್ಗದ ।
ಹರನೊಳ್ ಪುರುಡಿಸುವನೆಂದೊಡುದರದ ಪ್ರರುಳೇಂ ॥
ಕೊರಲೊಳ್ ವಿಷಮಂ ತಳೆದೊಕೆ ।
ಗಿರಿಶಂ ತಾಂ ತಳೆನನಲ್ತೆ ತುದಿನಾಲಗೆಯೊಳ್ ॥ ॥೨೩॥

ನಿನಗೆ ನಗೆಯಲ್ಲದೇಂ ದು ।
ರ್ಜನನೆಂಬೀಪೆಸರ್ಗೆ* ಮೊಯ್ಯಗುವರ್ಪುವುದು ಕೇಳ್ ॥
ಕನಸಿನೊಳಂ ಗರ್ವಭವ ।
ಶ್ಚನನಮಗಿವಿನವಾರ್ಗೆ ಮಾಡಪಶುಭೋದಯಮಂ ॥ ॥೨೪॥

---

ಪಾ— 1. ನೊ. ಗ ॥

ಭೀತನುಮಂ ಖಳಕ್ಷಪಣಕ |
ಪ್ರೋತನುಮಂ ಪಱಿದು ಲೋಕಮಂ ಕಿಡಿಸಿದ ಬ ||
ವ್ಮ್ರೀತಿಯಲೆಯದೊಱೆ ವೊಗದೊಳ |
ಗೇತರ್ಕೆ ಪಿತಾಮಹಂ ಚತುರ್ಮುಖನಾದಂ || ||೩೫||

ಅತಿಪೀಡಿಸುಗುಂ ಸ್ಥಾನ |
ಚ್ಯುತನಾಗಿಯುಮಖಿಳಮಂ ಖಳಂ ನೃತಿವೀರು ||
ತ್ಪ್ರತಿತಂ ಪಥಿಕರ ಪದತಳ |
ಹತಿಯಂ ಹತಕಂಟಕಾಂಕುರಂ ಮಾಡುವವೋಲ್ || ||೩೬||

ಸತ್ತುಂ ಪಿಶುನಂ ಪೆಱಗರ್ಗೆ* |
ಪತ್ತುಂ ಮಾಡದಿರನೆಂದು ಮಱುಗಿದಪುದು ಮ ||
ಚ್ಚಿತ್ತಂ ಮೃತಮೂಷಮುಖಂ |
ಮತ್ತೆನಿಸದೆ ಬಸನಮೆಯ್ದೆಪವ್ರೋಲುಂಬಸನಂ || ||೩೭||

ಕಱೆಗಣಿಸಿದೊಡಂ ದರ್ಪಂ |
ಗಿಡಿಸಿದೊಡಂ ಕಳೆವುದರಿದು ಖಳನಂ ರಸೆಯೊಳ್ ||
ಪಡಗನೆ ಬಿದಿ ಪದಮುಮನೇಂ |
ಪಱೆಸನೆ ಬಂದೇಕೆ ಪಿಡಿವುದುರಗಂ ಧರೆಯೊಳ್ || ||೩೮||

ನೋಡಿರೆ ಸದ್ಗುಣಂಗಳನೆ ಕೇಳ್ದು ಕನಲ್ವ ಖಳಂಗೆ ಕರ್ಣಮಂ |
ಮಾಡಲೆ ಪೋಗಿ ಮಸ್ತಕಮನಯ್ಯೊ ವಿಧಾತ್ರನದೆಂತು ಸರ್ಪನೊಳ್ ||
ಮಾಡಿದನಾಬುಧಂಗಮಿದು ಸರ್ಪನಿವಂ ಖಳನೆಂಬ ಬುದ್ಧಿ ಮೋಱ |
ಕೂಡದೊ ಕಂಡೊಡಂ ಕಮಲಗರ್ಭನುಮಂ ಖಳನಾಳಿಗೊಂಡನೋ ||೩೯||

ತಲೆಯಂ ತೂಗುವನೊರ್ವನುರ್ವಿ ಕೆಲದೊಳ್ ಕಾಲ್ಕಿಬ್ಬಮಂಕಟ್ಟೆಕೊ[1] |
ಟಲೆಗೊಂಡೂಱ್ವವನೊರ್ವನೊಲ್ದವರ ಚಾತುರ್ಯಕ್ಕೆ ಕ್ಕೆ[1]ವಾರ[1]ಮಂ ||
ಪ್ಪೊಲೆಗೆಟ್ಟೇವವನೊರ್ವನಿಂತಕಟ ಯಕ್ಷೋಯಾದೃಶಸ್ತಾದೃಶೋ |
ಬಲಿಯೆಂಬುಕ್ತಿಗೆ ದುರ್ವಿದಗ್ಧರೆ ಮಲಂ ನೋಂತರ್ ಪೆಱರ್ ನೋಂತರೇ ||

ಪಾ— 1. ಚ್ಛಾಗ. ಗ॥

ನೆಲಕೆ ನೆಗೞ್ತೆ ಗರ್ತಮನೆ ಮಾಡಿಪ್ಪುದಱಿಂ ಬಿದಿ ಮಾಡನೇಕೆ ಗ |
ಳ್ಗಲನಹಿಮಸ್ತಕಕ್ಕೆ ಮಣಿಯಂ ಪಲವಾಗಿರೆ ಲೋಭಿಯೆಂಬ ಕಾ ||
ವಲುಮನೊಱಲ್ದು ಮಾಡುವುದಱಿಂದುೞಿ ಮಾಡನದೇಕೆ ಮತ್ತಮೊಂ |
ದೆಲವಮನೋಡನಂದೊಸೆದ ಗುಳ್ಳಿಯನೊಳ್ಳಿಯನಬ್ಜಸಂಭವಂ ||೪೧||

ಬೇಱೆ ಕವಿಗಳ್ಗೆ ವಿನಯಂ |
ದೋಱದೆ ಬೇಡ್ಪವರ್ಗೆ ಬೇಡ್ಪ ತೆಱವಿಂ ಧನಮಂ ||
ಬೀಱದೆ ಬರ್ಕುಮೆ ನಿಂಬಿಯ |
ಸೂಱೆಯೆ ವಿಧುವಿಶದಕೀರ್ತಿ ಭುವನತ್ರಯದೊಳ್ || ||೪೨||

ಬಳ್ಳಿ ಮೊದಲಾಗಿ ಮೊದಲೊಳ್ |
ಗೆಳ್ಳನಿತುಂ ಪೊನ್ನನಿಕ್ಕದೊಡೆ ಪರ್ಬದು ಪೊ ||
ನ್ನೆಳ್ಳ ನರನಿತ್ತೊಡಲ್ಲದೆ |
ಬೆಳ್ಳನೆ ಪರ್ಬುಗುಮೆ ಕೀರ್ತಿಲತೆ ದಿಕ್ತಟಮಂ || ||೪೩||

ಜೀವಿಸುಗೆ ವಜ್ರಲೋಭಿ ಯು |
ಗಾವಧಿವರಮಲ್ಲದಂದು ಧಾತ್ರನ ಬಲದಿಂ ||
ಪೂವಾಗಿ ಪುಟ್ಟಿ ಧನಮಂ |
ಕಾವಂತುಟೆ ಲೋಕಮೆಲ್ಲಮಂ ಮೆಲ್ಲದಿರಂ || ||೪೪||

ಕಾಣನೆ ಜವನೇಕೆ ನಿಜ |
ಪ್ರಾಣಮನಿಡುವನೊ ಮಡಂಗಿದೊಡಮೞಿಯೊಳ್ಧನಮಂ ||
ಕ್ಷೋಣಿಯೊಳಗಬ್ಬೆಯುೞಿಯದ |
ಕೋಣೆಯುಮಾತೂಣನಾಡದೆಡೆಗಳುಮೊಳವೇ || ||೪೫||

ಪಾಷಾಣಮುಮೊಳಗಾಗಿ ವಿ |
ಶೇಷಣಮಂ ಪಡೆದು ದೇವಕುಳಮಕ್ಕುಮದೇಂ ||
ದೋಷಮೆ ಪುರುಷಾಕಾರದ |
ಪಾಷಾಣಮದೆಲ್ಲಿ ಬಾರ್ತೆಯಾದುದು ಪೇೞಿಂ || ||೪೬||

ನಿಲ್ಕಾನಸನೆಂಬರೆ ನಿ ।
ಲ್ವಲ್ಮೀಕೋರಗನನಪ್ರತೀಕಾರಶ್ರೀ ॥
ಗುಲ್ಮವ್ಯಾಧಿಯನೀವನ ।
ಶಾಲ್ಮಲಿಯಂ ಲುಬ್ಧನೆಂಬ ಗೃಹಲುಬ್ಧಕನಂ ॥ ॥೪೭॥

ಕಾಡಿ ಕಱೆಯದ ಘಟೋಧ್ನಿಯ।
ಕೋಡಿಯನೋಡಿಸದ ಕೆಱೆಯ ಕುಡದೊಡಲೊಳಗೆ ॥
ಱ್ಕಾಡುವ ಕುಬುದ್ಧಿಯೋದಿನ।
ಕೇಡಂ ಕಾಣರೆ ಕದರ್ಯರೇಕೆಯೊ ಕಿವುಡರ್ ॥ ॥೪೮॥

ಫಣಿಯ ಫಣಾಮಣಿಯುಂ ವಾ ।
ರಣರದಮುಂ ವ್ಯಾಘ್ರಚರ್ಮಮುಂ ಚಮರಮೃಗೀ ॥
ಗಣವಾಲಮುಮತಿಕೃಪಣನ ।
ಪಣಮುಂ ಬಾೞಿಲ್ಕೆ ಸಾರಮಾರುಮನೆಂದುಂ ॥ ॥೪೯॥

ಸಾಯದದೇವಗೆ ಸುಡೆಯುಂ ।
ಸೀಯದೆ ಸಲೆ ಪಿಶುನಶುನಕನೋಯದೆ ತಿನೆಯುಂ ॥
ನೋಯದ ಬೇಯದ ಬಾಯದ ।
ಕೀಯದ ಪೆಣನಲ್ತೆ ಕುಡದ ಕೊಳ್ಳದ ಕೃಪಣಂ ॥ ॥೫೦॥

ಕರೆದುಚ್ಚಾಸನದಲ್ಲಿ ಕುಳ್ಳಿರಿಸಿ ಪೂಜಾಪೂರ್ವಕಂ ಕಾವ್ಯಸಾ।
ಗರಮಂ ಪೊಯ್ದೊಡಮಿನ್ನದೇಕೆನೆನೆಗುಂ ಮೂರ್ಖಂ ಮಹೋತ್ತುಂಗಮಂ
ದಿರಮಧ್ಯಸ್ಥಿತಪೀಠದೊಳ್ ನಿಱಿಸಿ ದೈವಂಮಾಡಿ ತೀರ್ಥಾಂಬುಮಂ ।
ಸುರಿದೆಲ್ಲಂ ಪೊಡೆವಟ್ಟು ಪೂಜಿಸಿದೊಡಂ ಕಲ್ ಮೆಲ್ಲಿತೇನಾದುದೇ ॥೫೧॥

ನಿಂದಿಸಿದಪರೆಂದಾದೊಡ।
ಮೊಂದನೆ ಗುಣದೊಳ್ ದುರಾತ್ಮನೆಂದಿನಿತುಮನಾ॥
ನೆಂದೆನುಱಿದಂತಿರೆಮಗೇ।
ವಂದಪ್ಪುದೊ ಪೆಱರ ಗುಣದೊಳಂ ದೋಷದೊಳಂ ॥ ॥೫೨॥

ಅರ್ಯ್ಯರ ಯಶಮಿದು ಖಳರ ಕ|
ದರ್ಯ್ಯರ ದುರ್ಯ್ಯಶಮಿದೆಂದು ತೋರ್ಪರ್ಲ್ಲಿಯೆ ತಾ ||
ತ್ಪರ್ಯ್ಯಮೆನಗಾಂ ಜಗಕ್ಕಾ|
ಚಾರ್ಯ್ಯನೆ ಕಣ್ಣೊಱಿ ಕಲ್ಪಿಪಂತೆಲ್ಲರುಮಂ || ||೪೩||

ಅದಱಿಂ ಜಸಮಂ ಪಡೆವೊಡೆ|
ವಿದಗ್ಧಕವಿವೃಷಭನಪ್ಪುದೇಗೆಯ್ದುಮದಾ ||
ಗದೊಡೆ ಗುಣಿಯಪ್ಪುದದುಮದಾ |
ಗದೊಡೊಪ್ಪುವ ಚಾಗಿಯಪ್ಪುದಪ್ಪೊಡೆ ಪುರುಷಂ || ||೪೪||

ಕುಡುವವನೇನ ನಿತ್ತಪನೊ ಕಟ್ಟಿ ಬುಧಾಳಿಗೆ ಪೊನ್ನ ಮೊಟ್ಟೆಯಂ |
ಕುಡುವೊಡೆ ಚೆಚ್ಚರಂ ಕುಡುವುದುಳ್ಳುದನಂತದು ತೀರಿದಂದು ಕೈ ||
ಯುಡುಗದೆ ತಂಬುಲಂಗುಡುವುದಂತದು ತೀರಿದೊಡಂ ಪ್ರಭುತ್ವದೊಳ್ |
ತೊಡ*ರ್ದಿರದಾಱೆ ಕೂಱೆ ನಯದಿಂ ವಿನಯಂಗೆಯಲೇನೊ ತೀರದೇ ||೪೫||

ಕಾಯಿಲ್ಲದೆ ಪಣ್ಣಂ ತನ|
ಗಾಯಿಲ್ಲದೆ ಬಾಱಿನುತ್ತು ಬಿತ್ತದೆ ಫಲಮಂ ||
ಈಯದೆ ವಿಧುವಿಶದಯಶಃ|
ಶ್ರೀಯಂ ಬಯಸಿದೊಡೆ ಬರ್ಕುಮೋ ಬಗೆವಾಗಳ್ || ||೪೬||

ಇತ್ತು ಶರೀರಮಂ ಖಚರನಂದಹಿವೈರಿಗೆ ಮರ್ತ್ಯಲೋಕಸಂ|
ಪತ್ತುಮನೈದೆ ಕಾದನಹಿಲೋಕಮನೊಂದನೆ ಕಾದ[1]ನಲ್ತವಂ||
ತುತ್ತಿದೊಡುರ್ವ್ವಿಯಂ ತಳೆದ ಶೇಷನನೆತ್ತಣ ಭೂತಧಾತ್ರಿ ತಾ|
ನೆತ್ತಣ ವಾರ್ಧಿಯೆತ್ತಣ ಕುಲಾಚಲಮೆತ್ತಣ ಜೀವರಾಶಿಗಳ್|| ||೪೭||

ಭಯಮಿನಿತೇಕೆ ಕಾಂಚನಕೆ ಸಜ್ಜನರತ್ತಣಿನಿಂದುಕಾಂತಕೀ|
ರ್ತ್ತಿಯೊಳೆ ನಿಜಾಂಗಮಂ ಬಿಳಿದುಮಾಡಿದಪರ್ ಬುಧರೆಂದು ತಾಂ ಧರಿ||
ತ್ರಿಯೊಳಡಗಿರ್ದ್ದೊಡಂ ಕರೆದು ಕಲ್ಲೊಳಗಿರ್ದ್ದೊಡಮೊಲ್ಲದೋಡಿ ಲೋ |
ಭಿಯ ಮಱೆವೊಕ್ಕೊಡಂ ತೆಗೆದು ಕೊಟ್ಟಪರಲ್ತೆ ವದಾನ್ಯವಲ್ಲಭರ್ ||೪೮||

---

ಪಾ— 1. ನಂತವ.

ಆವ ಗುಣಕ್ಕಮಾವ ಗುಣಮುಗ್ಗಳಮಾಗುಣಮೊಂದೆ ಮರ್ತ್ಯರೊಳ್ ।
ತೀವಿದೊಡಾಗಳಂತೆ ಕವಿತಾರದೆ ತಾನೆ ಪಯೋಧಿಗುಳ್ಳ ಗು ॥
ಣ್ಪಾವಗಮಿಂದ್ರಜಾತನದಟಾವಗಮಾಗಸದೊಳ್ ಪೊದಳ್ದ ಪೆಂ ।
ಪಾವಗಮಬ್ಜಗರ್ಭನ ಬಿಮಾವಗಮರ್ಕನ ತೇಜಮಾವಗಂ ॥೫೯॥

ಕೇಣಿಯೊಳಪ್ಪೊಕ್ಕು ತಾರದೆ ಪರೀಕ್ಷೆಗೆ ಪಾರದೆ ತೂಗಿ ಕೊಂಡು ಕೇ ।
ವಣಿಸದೆ ಪೆಜ್ಜಮಂ ಕಳೆಗು ಕೋಯದೆ ತಾಂ ಮುಮೆಯ್ಗೆ ಪರ್ಪ ಸ ॥
ದ್ಗುಣಮಣಿಯೆಂಬ ಭೂಷಣದಿನಾವನಲಂಕೃತನಾಮಹಾತ್ಮನಂ ।
ಗುಣಕೆಟುಗೊಂಡು ಕೊಂಡು ಕೊನೆದಾರ್ಗಳ ಕೀರ್ತಿಸರೀಧರಿತ್ರಿಯೊಳ್ ॥

ನಿಲ್ಲದ ತಣ್ಣೆಲರ್ ಗಳಗೆಯೊಳ್ಕಳವಾ ಫಲಮೊಂದು ಮೂರ್ತಮುಂ ।
ಸಲ್ಲದ ಬೇಂಟಮುಲ್ಲಟಿಸಿ ಮಿಂಚುವ ಮಿಂಚಿರುಳಾಗಿ ಪೊತ್ತಟಿಂ ॥
ಗಿಲ್ಲದ ಚಂದ್ರಕಾಂತಿ ನೆಲೆಗೊಂಡುದುಗಂಡುಮುದೇಕೆ ಕಾವ್ಯದೊಳ್ ।
ಬಲ್ಲ ಮಹಾತ್ಮರುಂ ನಿಲಿಸಲೊಲ್ಲರೊ ಭಂಗಚಲದ್ಗುಣಂಗಳಂ ॥೬೧॥

ನಿಟ್ಟಿಗೆಮಂದು ಕೋಮಳಗುಣಂ ಗೆಡೆಗೊಂಡಿರೆ ಪೂವಿನಂತಿರಾ ।
ಯ್ದಿಟ್ಟ ಪದಂ ಬೆಡಂಗೆನಿಸೆ ಬಣ್ಣಸರಂ ಪೊಸತಾಗೆ ನುಣ್ಪೊಡಂ ॥
ಬಟ್ಟಿರೆ ಬಂದಮೊಂದೆ ಚತುರಾಳಿ ಕರಂ ಬಸದಾಗೆ ಬಾಸಿಗಂ ।
ಗಟ್ಟಿವನಂತು ಕಟ್ಟುವುದು ಕಬ್ಬಮನುಬ್ಬಿನಮಾಗೆ ಕಬ್ಬಿಗಂ ॥೬೨॥

ಅಕ್ಕರಿಗರ ಬಗೆಗಂ ಜೆ ।
ಣ್ಣಕ್ಕರಿಗರ ಬುದ್ಧಿಗಂ ಪ್ರಭಾವಾರ್ಥತೆಯಿಂ ॥
ಸಕ್ಕದಮುಂ ಕನ್ನಡಮುಂ ।
ಸಕ್ಕಸಮಂ ಕೇಳ್ಪೊಡೆನಿಸಿ ಪೇೞ್ವುದು ಕೃತಿಯಂ ॥ ॥೬೩॥

ರಸಿಕರ ಪೊಸಬಗೆಗಿಂಪಂ ।
ಪೊಸತಂ ಪೊಸಯಿಸುತುಮೊಂದೆ ಪೊರೆಯೆತ್ತಲೊಡಂ ॥
ರಸಮೊಸರದೊಡೇಂ ಬಸನಮೆ ।
ಬಿಸುಡುವುದಾವುಚಿತ ಕಬ್ಬಮಂ ಕಬ್ಬಮುಮಂ ॥ ॥೬೪॥

ಓದಲೊಡಮಿಂಪಿನಿಂದೆಲ।
ರೊದಲೊಡಂ ಸುರಭಿಶೀತದಾಮೋದದಿನೇಂ॥
ಮೋದದೊಡೆ ಕವಿತೆಗಂ ಕಡು।
ಮಾದಾವೂಮಿಂಗಮೊಗ್ಗ ಮುಡಿಗಿಕ್ಕುವುದೇ ॥ ||೬೫||

ಲಲಿತಂ ಪ್ರತೀಯಮಾನೋ।
ಪಲಕ್ಷಿತಂ ವಾಚ್ಯಮಾದೊಡೊಪ್ಪದು ಕೃತಿ ಪೆ॥
ರ್ಮೊಲೆಯಂ ಮೆಱೆದೊಡೆ ಸಲೆ ಕ।
ಣ್ಮಲರಂ ಮೆಱೆಯದೊಡೆ ಯುವತಿಯೇನೊಪ್ಪುವಳೇ ॥ ||೬೬||

ಅಕ್ಷರದರಿದ್ರರಳಿಕವಿ।
ಚಕ್ಷಣರೋದಿದೊಡಮಪ್ಪುದೇಂ ಕಾವ್ಯಕಳಾ॥
ಶಿಕ್ಷಕರೊಸೆದು ಪರೀಕ್ಷಕ।
ರೀಕ್ಷಿಸೆ ಕೃತಿಯಂ ಕೃತಾರ್ಥರಲ್ಲರೆ ಕವಿಗಳ್ ॥ ||೬೭||

ದುರ್ಜನರೆ ದೋಷಮಂ ಕಳೆ।
ದಾರ್ಜಿಸುಗೆ ಗುಣಾತಿಶಯಮನೆಮ್ಮಯ ಕೃತಿ ಸಂ ॥
ಮಾರ್ಜನಿಗವಕರನಿಕರವಿ।
ಸರ್ಜನದೊಳ್ ಮುಖ್ಯವೃತ್ತಿಯೇನಿಲ್ಲದುದೇ ॥ ||೬೮||

ಪಾಷಾಣಹೃದಯರಪ್ಪೊಡೆ।
ದೂಷಿಸಿ ಮತ್ಕಾವ್ಯಮಂ ಪರೀಕ್ಷಿಸುಗೆ ಗುಣಾ॥
ನ್ವೇಷಿಗಳಪ್ಪೊಡೆ ಕನಕನಿ।
ಕಾಶದೊಳೇಂ ನಿಕಷದೃಷದಮುಜಸದರೊಳರೇ ॥ ||೬೯||

ಸ್ಮರಶರಘಾತದಿಂ ಬಿರಿವ ಮೂರ್ಖನನಾರವೆಯೆಂದದಿಂ ಸುಧಾ।
ಕರಕಿರಣಂಗಳಿಂದೊಸರ್ವ* ಶೀತಕರೋಪಲದಂದದಿಂ ಮನೋ ॥
ಹರಸರಸತ್ವವೆಂಬ ಗುಣಮಾಳಿಸಿ ಮೋಳಿಸುವೆನ್ನ ಕಾವ್ಯಮಂ ।
ಪೊರೆದು ಮೃದುತ್ವಬೊಳ್ ಖಳನುಮೇಂ ಗಳ ಕೇಳದೆ ಪೋಗಲಾರ್ಕುಮೋ॥

ಮತಿಮಂಥಾದ್ರೀಂದ್ರದಿಂದಂ ಜಿನಪತಿಮತವಾರಾಶಿಯೊಳ್ ನೂತ್ನರತ್ನ।
ತ್ರಿತಯಂಮುಂತಾಗಿಧರ್ಮಾಮೃತಮನಯಸುಖೋರ್ವೀಜಮಂಸಾರಸಾರ॥
ಸ್ವತಲಕ್ಷ್ಮೀದೇವಿಯಂನಿರ್ಮಲಗುಣನಿಧಿಯಂ ಪೆತ್ತನೊತ್ತಿರ್ದ ಧೂತೋರ್
ಕ್ತಿತರಂಗಕ್ಷ್ವೇಡಮಂ ನುಂಗುವಿನಮಮಳಮತ್ಕೀರ್ತಿಚಂದ್ರಾವತಂಸಂ॥

ರಸಭಾವಂ ಪೊಣ್ಮೆ ವಕ್ತ್ರಂ ತೊಳಗೆ ವಿಕಸಿತಂಜಾತ್ಯಲಂಕಾರಮಾಳೀ।
ಕಿಸೆಕೊಂಕುಂ ರೇಖೆಯುಂ ರಂಜಿಸೆ ಮಿಸುಗೆ ಪದನ್ಯಾಸಮಿಂಬಾಗೆ ವೃತ್ತಿ॥
ಪ್ರಸರಂ ನೃಷ್ಟಿಪ್ರಸಾದಂ ಪಸರಿಸೆ ಸತತಂ ಭಾರತೀದೇವಿಯೆನ್ನೀ।
ರಸನಾರಂಗಾಗ್ರದೊಳ್ ನರ್ತಿಸುಗೆ ಬುಧಜನಸ್ತೋತ್ರತೂರ್ಯಂಗಳಿಂದಂ॥

ಜತಿಗಳವಟ್ಟಬಣ್ಣದಿನಮರ್ಚಿ ತೊಡರ್ಚಿದ ಚಂದದಿಂದಳಂ।
ಕೃತಿಗಳವಟ್ಟ ಮಾರ್ಗದಿನಿದಿರ್ಚಿದ ರೀತಿಯಿನಾಳ್ದ ಧಾತುವಿಂ॥
ಸ್ತುತಿಗೊಳಗಾದ ಮಾತಿನ ತೆರಳ್ಕೆಗಳಿಂ ರಸಗೇಯಮಂತಿರೀ।
ಕೃತಿ ಪೊಸದೇಸೆಯಿಂದೆಸೆದು ಸೋಲಿಪುದಚ್ಚರಿಯೇ ರಸಜ್ಞರಂ ॥೨೩॥

ವೀಣೆಗಣಕ್ಕೆ ಸೊಸದೆ ಸುಖೋದಯಮಂ ಶ್ರುತಿಮೂರ್ಛಿತಂರಣ।
ದ್ವೀಣೆಯ ನುಣ್ಚರಂ ಫಣಿಗಮಿಾವುದು ಲೋಚನಗೋಚರಂಗಳಂ॥
ಪ್ರೀಣಿತಸರ್ವಶೂನ್ಯಹೃದಯಂ ರಸವತ್ಕೃತಿಬಂಧಬಂಧುರಂ।
ವಾಣಿ ಬುಧಾಳಿಗೇಂ ಕುಡದೆ ಸನ್ಮದಮಂ ಕವಿರಾಜಮಲ್ಲನಾ ॥೨೪॥

ಅಲರಂಬಿಕ್ಷುಧನುಸ್ಸಹಾಯಮಮೃತಾಂಶುದ್ಯೋತನಂ ಯಾಮಿನೀ।
ಲಲಿತಂ ಸೋಲಿಸುಗುಂ ವಸಂತಸಮಯಪ್ರಾದೇಶಿಕಂ ದಕ್ಷಿಣಾ॥
ನಿಲನಂತಲ್ಲಿದು ನಿಸ್ಸಹಾಯಸುಭಗಂ ನಿಷ್ಕಾಮಿ ನಿಶ್ಯೇಷಕೋ।
ಮಲಮೆಂದುಂ ಮಧುರಸ್ವಭಾವಸುಖದಂ ಕಾವ್ಯಂ ಕಲಾಕಾಂತನಾ ॥೨೫॥

ಸರಸಮಹಾಕವೀಶ್ವರಮಹೀತಳದೊಳ್ ಪುಳಕಾಂಕುರಂಗಳು।
ಬ್ಬರಿಸೆ ಮೃದೂಕ್ತಿಬಿಂದುಚಯಮಂ ಸವಿದಾಜಿ ವಿದಗ್ಧಚಾತಕಂ॥
ನರಪಸಭಾನಭಸ್ಸ್ಥಳದೊಳುನ್ನತಿವೆತ್ತು ರಸಪ್ರವಾಹಮಂ।
ಸುರಿವುದನಾರತಂ ಸುಕರಕಾವ್ಯಘನಂ ಕವಿರಾಜಮಲ್ಲನಾ ॥೨೬॥

ಪಿರಿದನುರಾಗದೋದುವರ ನಾಲಗೆಗಳ್ಗಮರ್ದಾದುದೊಳ್ಪು ಕೇ ||
ಳ್ವರ ಕಿವಿಗಳ್ಗೆ ಮಾಣಿಕದ ಮಂಜರಿಯಾದುದು ಭಾವಿಸುತ್ತಮಿ ||
ರ್ಪರ ಬಗೆಗಳ್ಗೆ ಪೊಚ್ಚಪೊಸವೇಟದ ಪೆಣ್ಣವೊಲಾದುದಿಂಪಿನಿಂ |
ಸುರುಚಿರಕಾಂತಿಯಿಂ ಸೊಬಗಿನಿಂದೆಸೆವೀಕೃತಿ ನೇಮಿಚಂದ್ರನಾ ||೩೭||

ಸಾತಿಶಯಾರ್ಥಮುಮಂ ನೆ |
ಲ್ವಾತುಮನೊಪ್ಪಿಸಿದರೊಸೆದು ತಮಗಿಲ್ಲದುದಂ ||
ಖ್ಯಾತಂಗೆ ಸುಕವಿನೇಮಿಗೆ |
ಭೂತಭವದ್ಭಾವಿಕವಿಗಳೇನೊಳ್ಳಿದರೋ || ||೩೮||

ಯುವತಿ ಸರಸತಿ ಪುರಾತನ |
ಕವಿರಮಣನನಱಿದಳಿಲ್ಲ ನಿರ್ಮಳದಶನ ||
ಚ್ಛವಿಕುಸುಮಿತರಸನಾಪ |
ಲ್ಲವತಲ್ಪದೊಳಿರ್ದು ಸುಕರಕೆವಿಶೇಖರನಾ || ||೩೯||

ಚತುರರೆರ್ದೆಯಿಂದಮಿೞಿಯಳ್ |
ಸ್ತುತಿಯಿಂ ನಾಲಗೆಯಿನಗಲಳೆಂದುಂ ತನ್ನೀ ||
ಕೃತಿಕಾಂತೆ ನಿಜಕಳಾಕುಶ |
ಲತೆಯಿಂ ಮತ್ತೆಂತು ಮೆಱೆವನೋ ಕವಿಧವಳಂ || ||೪೦||

ಅನುಭಾವವ್ಯವಸಾಯಸುಪ್ರಕಟಿತಂ ನಾನಾವಿಭಾವಪ್ರಧಾ |
ನನಿಮಿತ್ತಂ ವ್ಯಭಿಚಾರಿಭಾವಪರಿಪುಷ್ಟಂ ಸ್ಥಾಯಿಭಾವಾತ್ಮಕಂ ||
ತನು ಶೃಂಗಾರರಸಕ್ಕೆ ಸಂದಣಿಸಿದಾಶೃಂಗಾರಮಂ ಕಾವ್ಯಬಂ |
ಧನದೊಳ್ ತಾಂ ಸೆಱೆಗೆಯ್ದು ಮೆಯ್ಮೆಯೊಳಿವಂ ಶೃಂಗಾರಕಾರಾಗೃಹಂ ||

ಓತರ ಗೆಯ್ತದಂತೆ ರಸಭಾವವೊಡಂಬಡೆ ನಲ್ಲರಟ್ಟಿದೊ |
ಳ್ಮಾತುಗಳಂತೆ ಮಾತುಗಳೊಳಂಪೊಸಬಿತ್ತರೆ ಕಾವ್ಯಭೂಷಣಾ ||
ರ್ಥಾತಿಶಯಂ ಪ್ರಿಯರ್ ತುಡಿಸಿದರ್ಥವಿಭೂಷಣದಂತಿರೊಪ್ಪೆ ಪೇ |
ಳ್ದಾತನದಾರೊ ನಾನಱಿಯೆನೆಂತಿನಿಯಂ ರತಿರಾಗದೋಹಳಂ || ||೪೧||

ಇನ್ನು ಕವಿವ್ರಜಂ ಪಡೆಯಲೀಸ್ರೊಸದೇಸೆಯನೀಸದರ್ಥಮಂ ।
ಮುನ್ನಿನ ಸತ್ಕವೀಶ್ವರರ್*ಗಮೇಂ ದೊರೆಕೊಂಡುದೆ ಕೂಡೆಬಿನ್ನಣಂ ॥
ಸನ್ನಿದಮಾದುದಕ್ಕರದಮರ್ಕೆಯಿನೀಕೃತಿಯುಂ ಕೃತಾರ್ಥನೋ ।
ಲ್ದೆನ್ನನೊ ಪೇೞ್ದಿನೇನಱಿಯ ನಮ್ಮರಸಂ ಕವಿರಾಜಕುಂಜರಂ ॥೮೩॥

ಈಯಂದದಿನತಿಚತುರ ।
ಸ್ತ್ರೀಯರುಮಂತಿಚತುರಕವಿಗಳುಂ ಕೇಳ್ದೊಲವಿಂ ॥
ಬಾಯಂ ಬಿಡುತಿರೆ ಕರ್ಣರ ।
ಪಾಯನಮೆನೆ ಪೇೞ್ವೆನೆಸೆಯೆ ಲೀಲಾವತಿಯಂ ॥ ॥೮೪॥

ಪೂಸುವ ಬೂದಿಗಂಗಭವನಂ ಭವಸಾರನನಾರ್ದು ಸುಟ್ಟ ಭೂ ।
ಷೇಶನ ಬುದ್ಧಿಗುದ್ಧವಱಿದಾಂ ಪೊಗೞೆಂ ಪೊ.ಗ*ೞ್ವಂ ಮನೋಜನಂ ॥
ಕೇಸುರಿಯಂತೆಪರ್ಬಿಪಟುವಾಗಿ ಪೊದೞ್ದುಳುರ್ದ*ಂತರಂಗಮಂ ।
ಕಾಸಿ ಕಪಾಲಿಯಂ ಪಿಡಿಬೊಜಲ್ದರೆವೆಣ್ಣನೆ ಮಾಡಿಬಿಟ್ಟನಂ ॥ ॥೮೫॥

ವಚನಂ ॥ ಅದೆಂತೆನೆ—

ಫಣಿರಾಜಸ್ಪರ್ಧಿದೀರ್ಘಂಪ್ರಚಲದಸಿಲತಾಲೋಲಜಿಹ್ವಾಂಕುರಂ ಜ್ಯಾ ।
ಕಿಣರೇಖಾಂಕಪ್ರಕೋಷ್ಠಂ ತಳೆಯೆ ಧರಣಿಯುಂ ತನ್ನ ದೋರ್ದಂಡಶೇಷಂ
ಪ್ರಣತಕ್ಷೋಣೀಶಚೂಡಾಮಣಿಗಣರುಚಿನೀರಾಜಿತೋಜ್ಜ್ವಾಂಘ್ರಿಚೂಡಾ ।
ಮಣಿಯೆಂಬಂ ಚಂದ್ರಚೂಡಾಮಣಿನಿಭನದಟಿಂದೊರ್ವನುರ್ವೀಶನಾದಂ ॥

ಅಹಿರಾಜಂ ಪೆಱೆತಟ್ಟುವೀಱೆ ದಿಗಿಭವ್ರಾತಂ ಕೊರಲ್ಕುರ್ಗದು ।
ರ್ವಹಧಾತ್ರೀಭರಮಂ ಪುರಾಣಕಮಠಂ ಬೆಂಬತ್ತಿ ಪೊತ್ತಿರ್ದೊಡಾ ॥
ವಹಿತಂ ಪೇೞ್ ಪ್ರಜೆಗೆಂದು ಪೊತ್ತನತುಲಾಜ್ಞಾರೂಪದಿಂ ದುಷ್ಟನಿ ।
ಗ್ರಹಶಿಷ್ಟಪ್ರತಿಪಾಲನಪ್ರಥಿತನಂದಾಪಾರ್ಥಿವಂ ಪೃಥ್ವಿಯಂ ॥ ॥೮೬॥

ಪಲಮೂಲಾಪಲ್ಲವೋಲ್ಲಾಸಿತೆ ಮಲಮಲಿನಚ್ಛಾಯೆ ಭಿನ್ನೇಭರಕ್ತಾ ।
ವಿಲಮುಕ್ತಾಪುಂಜಗುಂಜಾಭರಣೆ ಧೃತದಳತ್ಖಂಡಪಾಲಾಶಪುಷ್ಪೇ ॥

ಜ್ಜ್ವಲೆ ತದ್ಭೂಪಾಲಶಸ್ತ್ರೀಶಬರಿ ಸುಭಟಸೇನಾಟವೀಶೀರ್ಷತಾಳೀ ।
ಫಲಮಂಪ್ರತ್ಯರ್ಥಿಭೂಭೃತ್ಕಟಕದೊಳದಟಿಂದಾಯ್ದುಕೊಯ್ಯುತ್ತುಮಿರ್ಪಳ್

ತಳಿರುಡೆ ಮೆಯ್ಗೆ ಬಾಯ್ಗೆ ತನಿವಣ್ ನಡುನೆತ್ತಿಗೆ ತಣ್ಣೆಲಲ್ಗಳಂ ।
ದಳವಡೆ ಮೆಚ್ಚಿ ನಿರ್ಭಯದೆ ಕಾನನದೊಳ್ ತದರಾತಿಜಾತಮೀ ॥
ಗಳುಮಟೆ ಲೋಕಮಂತದನೆ ಕಂಡು ವನೇಚರರೆಂಗುಮಾಗಳುಂ ।
ತಳರದಿರಲ್ಕೆ ಮಾನಸರ್ಗೆಮುಗ್ರವನಕ್ಕಮದಾವ ಸಮ್ಮದಂ ॥ ॥ ೪೯ ॥

ವ॥ ಮತ್ತಮಾನರೇಂದ್ರನಮರೇಂದ್ರನಂತಧಿಕವಿಲೋಚನನುಂ, ಜಾತವೇದನಂತತುಲಪ್ರಭಾವಸುತಮೋಹನನುಂ, ಅಂತಕನಂತೆ ಮಹಿಷಾಸನಾಧಿಷ್ಠಿತನುಂ, ನಿಋತಿಯಂತೆ ಸದ್ವಿ[1]ಲಕ್ಷಸತ್ತ್ವಸಮೇತನುಂ, ವರುಣನಂತಿರಪ್ರತ್ಯಸ್ತಕರಣನುಂ, ಪವನನಂತೆ ಪದ್ಮಾಮೋದಮಂದಿರನುಂ, ಧನದನಂತೆ ಪುಣ್ಯಜನೇಶ್ವರನುಂ, ಭೂತೇಶನಂತೆ ವಿಭೂತಿನಿಮಿತ್ತಕೃತಕಾಮದಾಹನುಂ, ನಾರಾಯಣನಂತೆ ವರಾಹಪ್ರಷ್ಕರೋದಯೋದ್ಧೃತಧರಣೀವಲಯನುಂ, ಸರೋಜಸಂಭವನಂತೆ ಸಕಲಸಾರಸ್ವತಾಮರಸಭಾನುಭೂತಿಯುಂ, [2]ಶತಾನಂದಭೂತಿ[2]ಯಂತೆ ಸಮರಕ್ಷಣಾನಂದಿತದರ್ಶನುಂ, ಭದ್ರಗುಣನಾಗಿಯುಮನಾಗನುಂ, ವಿಬುಧಪತಿಯಾಗಿಯುಂ ಕುಲೀನನುಂ, ಅತಮನಾಗಿಯುಂ ವಿಬುಧರವಿದ್ವೇಷಿಯುಂ, ಅಜಾತಶತ್ರುವಾಗಿಯುಂ ಸದಾನಯಶಸ್ಕಾರಿಯುಂ, [3]ಅಪ್ರಮಾಣನಾಗಿಯುಂ ಮಾನವೇಶಿಯುಂ, ತಾರ್ಕ್ಷ್ಯಪ್ರಿಯನಾಗಿಯುಂ ಸಮಗ್ರಾಹಿಯುಂ, ಸುವರ್ಣಧರನಾಗಿಯುಮನಾದಿತ್ಯಾಗನುಮೆನಿಸಿದನಂತುಮಲ್ಲದೆಯುಂ ॥ ॥ ೫೦ ॥

ಅಮೃತಮಯೋಜ್ಜ್ವಲಾಶಯಮನಾಶ್ರಿತಗೋತ್ರಸಮೇತಮಂ ಮಹಾ ।
ಹಿಮಕರಸತ್ತ್ವಮಂ ಸುಜನಸಾಗರಮಂ ಸಲೆ ಪೆರ್ಚನೆಯ್ದಿಪಂ ॥
ಕುಮುದವನಪ್ರಿಯಂ ಸಕಲಮಂಡಲಭಾಸಿ ಸದಾನಭೋಗನು ।
ದ್ಗಮರುಚಿ ಶರ್ವರೀವಿರಹಸಂಪದನಾನರಲೋಕಚಂದ್ರಮಂ ॥ ॥ ೫೧ ॥

---

ಪಾ.— 1. ರಾ. ಖ॥ ಗ॥ 2. ಸದಾನಂದಸೂತಿ. ಕ॥ 3. ಮಧು. ಖ॥

ಸಕಲ[1]ಕಲಾ[1]ಧಿದೇವತೆಗೆ ದೇಗುಲಮಾಪುದು ಲಕ್ಷ್ಮಿಗೆ ಸಾಲಭಂ ।
ಜಿಕೆಯೆನೆ ತೋಳ್ಗಳೆಂಬ ಮಣಿಗಂಭದೊಳೊಂದಿರೆ ಸಂದ ಸಿಂಹಸೂ ॥
ದ್ರಿಕನೆನೆ ಶೂರವೀರ[2]ಮಣಿ[2]ವೃತ್ತಿ ಸುವರ್ಣಮಯಂ ಮುಖಂ ಪ್ರದೀ ।
ಪಕಕಲಶೋಪಮಾನಮೆನೆ ತನ್ನೃಪಮೂರ್ತಿ ಯಶಸ್ಸುಧಾತ್ಮಕಂ ॥೯೨॥

ಆವಿಭುವಿಂಗೆ ರಾಗರಸರಾಶಿ ಮನೋಹರಿಯಾಗಿ ಮಿಕ್ಕ ಮಾ ।
ದೇವಿಯೆನಿಪ್ಪ ದೊಡ್ಡಪೆಸ*ರ್ಗಂ ನೆಲೆಯಾದಳಪೂರ್ವರೂಪಶೋ ॥
ಭಾವತಿ ಪುಣ್ಯಶೀಲವತಿ ಕೇಳಿಕಳಾವತಿ ಪೆಂಪುವೆತ್ತ ಪ ।
ದ್ಮಾವತಿಯೆಂಬ ರಾಜಸುತೆ ದಾಶರಥಂಗವನೀಜೆಯಂದದಿಂ ॥೯೩॥

ಹರಿಯಂ ಸಾಮರ್ಥ್ಯದಿಂ ಸಾಹಸರಸಿಕತೆಯಿಂ ಪೋಲ್ವತತ್ಪಾರ್ಥಿವಂಗಂ ।
ಸಿರಿಯಂ ಸೌಂದರ್ಯದಿಂ ಪೆಂಪಿನೊಳಸಕಳಿವಾಕಾಂತೆಗಂ ಲೋಕಚೇತೋ ॥
ಹರಬಾಣಂ ಪುಟ್ಟಿದಂ [3]ರಾಜಿತ[3]ರತಿರಮಣಂ ದೃಪ್ತಭೂಮೀನಕೇತು ।
ಸ್ಫುರಿತಂ ಶೃಂಗಾರಕಾರಾಗೃಹನತಿಸುಭಗಂ ರೂಪಕಂದರ್ಪದೇವಂ ॥೯೪॥

ವದನಂ ಚಂದ್ರಪ್ರಭಂ ವಿಕ್ರಮಭುಜಮಜಿತಂ ಪಾಣಿ ಪದ್ಮಪ್ರಭಂ ಸಂ ।
ಪದಮೊಂದುಂ ವರ್ಧಮಾನಂ ಗುಣತತಿ ವಿಮಳಂ ತನ್ನ ಪೆಂಪೊಂದನಂತಂ ॥
ಹೃದಯಂ ಸ್ವಾಧೀನಧರ್ಮಂ ಮತಿ ಪುರುಚರಿತಂ ಶೀತಲಂ ಸುವ್ರತಂ ತಾ ।
ನವಱಿಂ ಪ್ರತ್ಯಕ್ಷತೀರ್ಥೇಶ್ವರನೆನೆ ನೆಗ*ೞ್ದಂ ವಿಶ್ವವಿದ್ಯಾವಿನೋದಂ ॥೯೫॥

ನಿಡುಗಣ್ ಪದ್ಮದಳೋಪಮಂ ಸ್ಮಿತಮುಖಂ ಚಂದ್ರೋಪಮಂ ತೋಳ್ಗಳ ।
ಪ್ಪೊಡೆ ದಿಙ್ನಾಗಕರೋಪಮಂಗಳುರಮುಂ ಶ್ರೀರತ್ನಪೀಠೋಪಮಂ ॥
ತೊಡೆ ರಂಭಾಲಲಿತೋಪಮಂ ಪದಯುಗಂ ಕೂರ್ಮೋಪಮಂ ತಾನದಾ ।
ದೊಡಮೇಂ ರೂಪು ವಿಚಾರಿಪಂದನುಪಮಂ ಶ್ರೀರೂಪಕಂದರ್ಪನಾ ॥೯೬॥

ಲಳನೆಯರಾತನಂ ಬಯಸಿ ನೋಡಲೊಡಂ ಮದನಾಗ್ನಿದಾಹಮು ।
ಗ್ಗಳಿಸದೆ ಮಾಣದೆಂದು ಕೃಪೆಯಿಂ ಪಡೆದಂ ಬಿದಿ ಚಂದ್ರಬಿಂಬಮಂ ॥

ಪಾ.— 1. ಗುಣಾ. ಖ॥ 2. ಗುಣ. ಕ॥ 3. ರಾಜಕ. ಗ॥

ಮುಳಯುಜಮುಂ ಮೃಣಾಳಕುಳಮುಂ ಕೊಳನಂ ಲತಿಕಾಗೃಹಂಗಳಂ ।
ತಳಿರ್ಗಳನೆಂದೊಡಂದಮನದೇವ್ರೊಗಳ್ವಂ ಕವಿತಾವಿಲಾಸನಾ ॥೯೭॥

ನಸೆವಡಿಗಳ್ ಪ್ರಗುಲ್ಫಗೆಡುವುಗ್ರಜವಮಾಯ್ತು ಸಿವಾಘಮೆಲ್ಲಿ ನೋ ।
ಡ್ಪೊಡೆ ತಳಿರಿಲ್ಲ ಕಾನನದೊಳೆಂದೊಡೆ ದೈನ್ಯದೆ ನೊಂದು ನೊಂದ ಕೇ ॥
ಸಡಿಗಳನೂದಿ ತಮ್ಮಿನಿಯರುಣ್ಮಿಪಶೋಕೆಯ ಪಲ್ಲವಂಗಳಂ ।
ಪಡೆದುಡುಗುಂ ವಿರೋಧಿವನಿತಾಜನಮಾರಣರಂಗಮಲ್ಲನಾ ॥೯೮॥

ಮುಸಕಂಗುಂದದರಾತಿಪಾರ್ಥಿವರ ಕಾಂತಾನೇತ್ರನೀರೇಜದೊಳ್ ।
ಬಿಸುನೀರಂ ಸುಕುಮಾರ[1]ಹೃತ್ಕುಸುಮದೊಳ್ ಶೋ[1]ಕಾಗ್ನಿಯಂ ನೀಳ್ದ ಸು
ಯ್ವಿಸಿಲಂ ತನ್ಮುಖಚಂದ್ರಬಿಂಬಕಯದೊಳ್ ವಿಕ್ರಾಂತದಿಂ ನೋಡಿ ಪು ।
ಟ್ಟಿಸುವಂ ತನ್ನೃಪನಂದನಂ ಪ್ರಭುಗಳೇನಂ ಮಾಳ್ಪೊಡಂ ತೀರದೇ ॥೯೯॥

ಜನತಾನಂದೈಕನೇತ್ರಂ ಪ್ರಿಯಮಧುಸಮಯಂ ರೂಪಕಂದರ್ಪದೇವಂ ।
ಮುನಿಸಿಂ ಚಾಪಕ್ಕೆ ಕೈನೀಡಿದೊಡೆ ನಡುಗುವರ್ ಪೊಕ್ಕು ನೀರೊಳ್ ಪೊರಳ್ವರ್
ವನಮಂ ಸಾರ್ದಿರ್ಪರೆಂದುಂ ತಳಿರನುಡುವರಂಭೋಜಮಂ ಪಾಸುವರ್ ಬೆ ।
ಚ್ಚನೆ ಸುಯ್ವರ್ ಪ್ರಾಜ್ಯರಾಜ್ಯಾಂಗನೆಯ ವಿರಹದಿಂ ವೈರಿವೀರಾವನೀಶರ್ ॥

ಓದಿಸದೆಮ್ಮನೇಕುಸಿರದಿರ್ಪೆಯೋ ಕುಡುಕಿಕ್ಕಲೊಲ್ಲದಂ ।
ತಾದುದೆ ರಾಜಪುತ್ರಿಯೆನೆ ಕಾಂಚನಪುತ್ರಿಕೆಯಂ ಶುಕಾಳಿ ಕೇ ॥
ಳ್ದಾದಮೆ ವಾನರಂ ತೆಱೆದ ಪಂಜರದಿಂದೆ ಬಿಡಾಲಭೀತಿಯಿಂ ।
ಪೋಗುದು ಪಾಱಿ ಕೀರತತಿ ತದ್ವಿಷದು[2]ದ್ವಿಷ[2]ಮಂದಿರಂಗಳೊಳ್ ॥

ಭೂರಿಭುಜವೀರರಾಕ್ಷಸಿ ।
ವೈರಿಗಳಂ ನುಂಗಲೆಂದು ನೀಡಿದ ಜಿಹ್ವಾ ॥
ಕಾರಮೆನಿಸಿದುದು ರಿಪುರುಧಿ ।
ರಾರುಣಕರವಾಳಮಾನ್ಯಪಾಲಕಸುತನಾ ॥ ॥೧೦೨॥

ಪಾ.— 1. ಹೃತ್ಕಮಲದೊಳ್ ಲೋ. ಗ॥ 2. ದ್ವಸ. ಕ॥

ಕ್ಷಾರತರಂ ಮದಕಲರಣ ।
ವಾರಣಮಸ್ತಕವಿಮುಕ್ತಮಣಿದಂತುರಮೀ ॥
ಧಾರಿಣಿಯಂ ಕಾದುದು ಮು ।
ನ್ನೀರಂತಿರೆ ತೋಳ ಬಾಳ[1]ದೀ[1]ನೃಪಸುತನಾ ॥ ॥೧೦೩॥

ಮೃಗಧರನಾನೃಪತನಯನೆ ।
ಪಗೆವರ ಪಾಟ್ಸರಿವ ಸೌಧಶಿಖರದಿನಸಿತೋ ॥
ರಗನೆಳಸೆ ತನ್ನ ಪುತ್ತಿಂ ।
ಗಗಿಪವ್ರೊಲತ್ತಿತ್ತ ತೊಲಗುತಿರ್ದಪನಿನ್ನಂ ॥ ॥೧೦೪॥

ಬಿರಿದು ವಿಷಮಾಸ್ತ್ರಹತಿಯಿಂ ।
ಪೊರ*ಟ್ದಿಂ ವೈಮುಖೆದರಾತಿನೃಪರಂ ನೆಲದೊಳ್ ॥
ನೆರಪಿಯೆ ನಾಣ್ಬದೆ ನೆಲವೆ ।
ಣ್ಗರಸಂ ತಾನಾದನಭಿನವಂ ಪ್ರಭುಚರಿತಂ ॥ ॥೧೦೫॥

ಬಿಡುನುತ್ತಂ ಗುಣದೊಳ್ ಚೆ ।
ಲ್ವಿಡಿದಿರೆ ಕೋದಂತೆ ಸುಕವಿಜನದ ಕೊರಲ್ಗಂ ॥
ತೊಡವಾದುದು ಪೊಸಗಬ್ಬದೊ ।
ಳಿಪೆ ಬಿಡುವೆಸರೋಳೆ ಸುಕರಕವಿಶೇಖರನಾ ॥ ॥೧೦೬॥

ಮದನವ್ಯಾಪ್ತಂ ದಕ್ಷಿಣ ।
ಸದಾಗತಿಸ್ನಿಗ್ಧನಾಕುಮಾರಂ ಮೆಯ್ವೊ ॥
ಚಿರ್ದ ಸುರಭಿಮಾಸದಂತಿರೆ ।
ಪುದಿದಬಳ್ಳಾಲತೆಗಳಲರ್ವು*ರ್ದೊಂದಚ್ಚರಿಯೆಃ ॥ ॥೧೦೭॥

ವ ॥ ಆಕುಮಾರಂ ವ್ಯಾಕರಣಕುಶಲನುಂ, ನಯ[2]ಚಿತ್ತಾ[2]ವಯನುಂ, ಕವಿತಾಕೋವಿದನುಂ, ವಾತ್ಸ್ಯಾಯನಧವಳನುಂ, ಸರಸಕಾವ್ಯಸರಸೀಸುಭಗಸಾರಸನುಂ, ಕಥಾಕರ್ಣನಕೃತಕೌತುಕಾದರನುಂ, ನಾಟಕಾವಲೋಕನವಿ

ಪಾ.— 1. ವಿಧಿ. ಕ॥ 2. ಚೇತೋ. ಗ॥

ಕಸಿತವಿಲೋಚನನುಂ, ಬಾಣಪ್ರವೀಣನುಂ, ಪ್ರಹಸನಪ್ರಗಲ್ಭನುಂ, ಪ್ರವಚನವಿಚಕ್ಷಣನುಂ, ಗೀತಗೋಷ್ಠೀವಿಶಾರದನುಂ, ವಲ್ಲಕೀವಲ್ಲಭನುಂ, ವಾಂಶವಾದನವಿದಗ್ಧನುಂ, ನಾಟ್ಯನೃತ್ಯನಿಪುಣನುಂ, ಲಲಿತಲಾಸ್ಯ[1]ಲಾಲಸ[1]ನುಂ, ಲಿಪಿಲಕ್ಷ್ಮೀಲಪನನಪರ್ಣನುಂ, ಸಕಲಕಲಾ[2]ಕುಲ[2]ಗೃಹನುಂ, ಸುಭಾಷಿತಬಿಂದುಗ್ರಹಣಚತುರಚಾತಕನುಂ, ವಿನೋದನದೀಸಮುದ್ರನುಂ, ಬುಧಸಂಗ್ರಹವ್ಯಸನಿಯುಂ, ಸೌಜನ್ಯಜನಕನುಂ, ಪರಿಹಾಸಪರಿಣತನುಂ, ಪುರುಷಾರ್ಥಪರಮಪಂಡಿತನುಂ, ಪರಾರ್ಥತೀರ್ಥತಾಪಸನುಂ, ಲಾವಣ್ಯಲಂಪಟನುಂ, ಜಲಕೇಳೀವಿಲೋಲನುಂ, ವನಕೇಳೀವಸಂತನುಂ, ಸುಖಾಮೃತಕೇಳೀಕಲಹಂಸನುಂ, ಯೌವನವನಕೇಳೀಕಾಮಕುಂಜರನುಂ, ಆಮೋದಮಧುಕರನುಂ, ಮಧುಸಮಯ[3]ಪುಷ್ಪಧನ್ವ[3]ನುಂ, ಸ್ಮರಸೌಭಾಗ್ಯಸಬ್ರಹ್ಮಚಾರಿಯುಂ, ಚೈತ್ರಕಾಮುದೀಕಾಮುಕನುಂ, ಕಾಮಿನೀಕುಚಕಕಪೋಲಪತ್ರಭಂಗವಿಚಿತ್ರಚಿತ್ರಕರ್ಮವಿಚಿತ್ರಕನುಂ, ಪ್ರೇಯಸೀಪ್ರಸಾದನವಿಧಿಸಾಧಿತಹಸ್ತಕೌಶಲನುಂ, ತರುಣೀಸ್ಫುರದಧರಕಳಿಕಾಕೋಕಿಲನುಂ, [4]ಅಧಿ[4]ಕ್ಷೇಪಕೃತನವವಧೂನೀವೀವಿನಿರ್ಮೋಚಕಚಮತ್ಕಾರಿಯುಂ, ಸುಂದರೀದರಸ್ಮಿತ[5]ಕುಸುಮಮಧ[5]ಪಾಲನುಂ, ವನಿತಾವನಘಸ್ಮರವಿರಹದವನಿಕ್ಷೇಪಣನಿಪುಣಪುಳಿಂದನುಂ, ಸ್ಮರಶರಪ್ರಹಾರಪಾರವಶ್ಯಪರಿಭೂತಭಾಮಿನೀರೋಮಭೇದಭಲ್ಲೂಕ ಮುಖವಿಲಿಖಿತಸುಕುಮಾರಶರೀರನುಂ, ವಿಟವಿದೂಷಕಶುಕ[6]ಪಿಕ[6]ಪ್ರಕರಮಧುರಮಾಕಂದನುಂ, ಶೃಂಗಾರಸಾರಸರ್ವಜ್ಞನುಂ, ನಾಗರಿಕನಾಗೆಯೂಥಪ್ರಿಯಪ್ರಸಾದಸಲ್ಲಕೀಪಲ್ಲವನುಮೆನಿಸಿ ಮನಸಿಜರಾಜನಂತೆಯಿನಿತ್ತಂಗಜರಾಜಲಕ್ಷ್ಮಿಗಂ ನಿಜಜನಕನಪ್ಪ ಚೂತಾಮಣಿಮಹಾರಾಜನೊಸೆದಿತ್ತ ಯುವರಾಜಲಕ್ಷ್ಮಿಗಂ ಸಮುಚಿತಮಾದ [7]ಮದನತೀ[7]ದೀರ್ಘಧವಳಾಪಾಂಗಮರೀಚಿಮಂಜರೀಚಾಮರಮುಂ ಇಕ್ಕುವ ವಿಮಳಚಾಮರಮೆಂಬುಭಯಚಾಮರಮುಂ ಪೂಗುಚ್ಛಂಬಿಗೆ ಮೇಗೆ ನೆಗೆದ ತುಂಬಿಗೊಡೆಯುಮೆತ್ತಿದ ಬೆಳ್ಗೊಡೆಯುಮೆಂಬ [8]ಸವಡಿ[8]ಗೊಡೆಯುಮೆಸೆಯೆ ಸಂಸಾರಸುಖಮನನವರತಮನುಭವಿಸುತ್ತುಮಿರೆ ||

ಪಾ.— 1. ಲಲಿತ. ಗ|| 2. ಕೋಶ. ಖ|| 3. ಸಧರ್ಮ. ಕ|| 4. ಅವಾ. ಗ|| 5. ಕುಪಿತವಚನ. ಗ|| 6. ಪೋತ. ಗ|| 7. ಮಧುದೂತೀ. ಗ|| 8. ಜವಳಿ ಗ||

ಅಕಲಂಕಾಗಮವೇದಿ ನೀತಿನಿಪುಣಂ ಕಾಲಕ್ರಿಯಾಲೋಕಕೌ ।
ಶಿಕವಿಜ್ಞಾನವಿಚಕ್ಷಣಂ ಸಕಲಶಾಸ್ತ್ರಾರ್ಥಪ್ರವೀಣಂ ಗುಣಾ ॥
ಧಿಕನಾರಾಜಕುಮಾರಕಂಗೆ ಗುಣಗಂಧಾಖ್ಯಪ್ರಧಾನಾತ್ಮಜಂ ।
ಮಕರಂದಂ ಪ್ರಿಯಮಿತ್ರನಾದನುಪಧಾಶುದ್ಧಂ ವಿಶುದ್ಧಾನ್ವಯಂ ॥೧೦೯॥

ಮಳಯೋತ್ಸಂಗಾಗ್ರದಿಂ ತೆಂಬೆರಲ[1]ರ್ವಲರಿಂ ಸೌರಭಂ ಸೌರಭಶ್ರೀ ।
ಕಳಿತಂ ಪುಷ್ಪಾಳಿ ಪುಷ್ಪಾವಳಿಯ ಪೊದಿದ ಚೆಲ್ವಿಂ ವಸಂತಂ ವಸಂತೋ ॥
ಜ್ಜ್ವಳಿತಂ ಕಂದರ್ಪನೊಪ್ಪಂಬಡೆವ ತೆಱದಿನಾಮಂತ್ರಿಮಾಣಿಕ್ಯನಿಂ ಭೂ ।
ತಳದೊಳ್ ಸಂಸೇವ್ಯನಾದಂ ಸರಸಕೃತಿಕಲಾನರ್ತಕೀನೃತ್ಯರಂಗಂ ॥೧೧೦॥

ಇದು ವಿದಿತಪ್ರಬಂಧವನವಿಹಾರಪರಿಣತ ಪರಮಜಿನಚರಣರಮ್ಯಹೈಮಾಚಲೋಜ್ಜ್ವಲಿತ ನಖಮಯೂಖಮಂದಾಕಿನೀಮಜ್ಜನಾಸಕ್ತ ಸಂತತೋತ್ಸಿಕ್ತದಾನಾಮೋದ ಮುದಿತಬುಧಮಧುಕರಪ್ರಕರ ಕವಿರಾಜಕುಂಜರ ವಿರಚಿತಮಪ್ಪ

## ಲೀಲಾವತಿಯೊಳ್

## ನಾಯಕಾಭ್ಯುದಯವರ್ಣನಂ

### ಪ್ರಥಮಾಶ್ವಾಸಂ.

---

ಪಾ.— 1. ಪರ್ವ್ಯಾ. ಗ ॥

ಶ್ರೀಕಾಂತಾಕಾಂತನಿಳಾ ।
ಲೋಕಸ್ತುತನೊಪ್ಪಿದಂ ಕುಬೇರನ ಕೆಳೆಯಿಂ ॥
ಶ್ರೀಕಂಠನೊಪ್ಪುವಂತೆವೊ ।
ಲಾಕೆಳೆಯನ ಕೂಟದಿಂದೆ ಕೃತಿಕುಲದೀಪಂ ॥ ॥೧॥

ವ॥ ಅಂತಾಸಹಾಯಂ, ಸಾಹಸದಂತೆ ಸಮರಸಹಾಯನುಂ, ಉದ್ಯೋಗೆದಂತರ್ಥಸಹಾಯನುಂ, ಶ್ರುತದಂತೆ ಬುದ್ಧಿಸಹಾಯನುಂ, ತ್ಯಾಗದಂತೆ ಕೀರ್ತಿಸಹಾಯನುಂ, ಕಾಮನಂತೆ ಕಾಮಸಹಾಯನುಂ, ದಯಾಗುಣದಂತೆ ಧರ್ಮಸಹಾಯನುಂ, ವಿಭವವಂತೆ ವಿನೋದಸಹಾಯನುಮಾಗೆ ಚೂಡಾಮಣೀಕೃತಚೂಡಾಮಣಿಪದನಖಮಣಿಮಯೂಖನಭಿರಾಮತಾರೂಢಯೌವನಂ ಯುವರಾಜಲಕ್ಷ್ಮೀಸುಖಸಮುದ್ರದೊಳ್ ಮೂಡಿ ಮುಳುಗಾಡುತ್ತುಂ ಕಂದರ್ಪದೇವನಿರ್ಪನವೊಂದು ದಿವಸಂ ॥ ॥೨॥

ಕುವಲಯದೀರ್ಘನೇತ್ರಮಲರುತ್ತಿರೆ ಮೂಡುವ ಮಿಂಗಳಾಕೆಯೊ ।
ಪ್ಪುವ ಮುಖಪದ್ಮದೊಳ್ ಮೊಡವಿ ಮೂಡಿದವೊಲಿರೆ ಕಾಲವೆಂಬ ಶಂ ॥
ಭುವಿನ ಶರೀರದೊಳ್ ಪುದಿದ ಗೌರಿಗೆ ರಾಗಮನೊಟ್ಟಿಕೊಂಡು ಮೂ ।
ಡುವ ಮೊಲೆಯಂತೆ ಮೂಡಿದುದು ಮೂಡಣ ದಿಕ್ಕಿನೊಳಿಂದುಮಂಡಲಂ ॥೩॥

ಸೋಂಕಲೊಡಂ ನಿಶಾತರುಣಿಯಂ ಶಶಿ ಸೋದರ್ದು ಸಂಜೆ ಸೀರೆವೋಲ್ ।
ಪಂಕಜಲೋಚನಂ ಮುಗಿದುವೆರ್ದುವು ಬಳ್ಳಿಮರಂತೆ ತಾರಕಾ ॥
ಸಂಕುಳಮಿಂದುಕಾಂತವಿತತಾಚಳತುಂಗನಿತಂಬಬಿಂಬದಿಂ ।
ದಂ ಕೊಳನಾಗಿ ತುಳ್ಕಿದುವು ತೆಳ್ವದದಂತೆ ನವದ್ರವಾಂಬುಗಳ್ ॥ ॥೪॥

ನನೆಯಿಂ ನೆಯ್ದಿಲಿನಾಲಿನೀರ್ಗಳಿಪದಿಂ ಕಾಮಾಗ್ನಿಯಂ ಮಗ್ಗಿಸಲ್ ।
ಮನಮಂ ತಂದ ವಿಯೋಗಿ*ಜಾಲದೆರ್ದೆಯೊಳ್ ನಟ್ಟುಚರ್ಗ [1]ಗಾ[1]ಟೀಟೆ ಬೆ ॥
ಚ್ಚನೆ ಪಾಯ್ತಂದು ಪೊಣಸ್ದ ರಕ್ತಜಲದಿಂದಂ ತೋಯ್ದು ಕಂದರ್ಪದೇ ।
ವನ ಚಕ್ರಕ್ಕಣೆಯಾಯ್ತು ರಕ್ತರುಚಿಯಿಂ ಬಿಂಬಂ ಸುಧಾಸೂತಿಯಾ ॥೫॥

ಪಾ.— 1. ಜಾ. ಕ॥ ಗ।

ಮುಡಿಗವಿದಿರ್ದ ಮಾಣಿಕದ ಮಂಡನಮಂತಿರೆ ತಾರಕಾಳಿ ತ ।
ಳ್ತುಡರ್ದ*ರುಣಾಂಶುಗಳ್ ಕುರುಳ ಕುಂಕುಮಮಂತಿರೆ ರೂಢಿಸಿತ್ತು ಕೆಂ ॥
ಪಿಡಿದ ಬೆಡಂಗಿನಿಂದಮೆ ನಿಶಾಪ್ರಸವೋತ್ಸವದೊಳ್ ವಿಳಾಸದಿಂ ।
ಮುಡಿದ ಮಹೇಂದ್ರದಿಗ್ವಧುವ ಬಣ್ಣದ ತೊಂಡಲನಿಂದುಮಂಡಲಂ ॥೬॥

ಕಳಸದ ಬಾಯ ಕೆಂದಳಿರನಂಗಜವಿಪ್ರನ [1]ಹೋಮ[1]ಕುಂಡದೊಳ್ ।
ಬಳೆಮರಿಯಂ ನಿಶಾಂಗನೆಯ ಬಟ್ಟಲ ಕುಂಕುಮಮಂ ಮನೋಜನ ।
ಗ್ಗಳಿಕೆಯ ಗಂಧಸಿಂಧುರದ ನೆತ್ತಿಯ ಸೇಂದುರಮಂ ಪೊದಱ್ದು ಪೋ ।
ಲ್ತಳವಿಗಳುಂಬಮಾದುದು ಸುಧಾಕರಬಿಂಬದ ರಾಗವೇಱ್ಗೆಯೊಳ್ ॥ ॥೭॥

ಅಲೆದಮೃತದೊಡನೆ ತಾರಾ ।
ಲಲನೆಯರಡಿದಳಿರನೂಡಲೆಂದು ಪದಂಗೆ ॥
ಯ್ದಲತಗೆಯ ಪಡಲದಂತಿವೊ ।
ಲಲೆಮುದು ಪರಿಪಕ್ವಬಿಂಬಮಂ ವಿಧುಬಿಂಬಂ ॥ ॥೮॥

ವಿರಹಿಗುರಿ ನಲ್ಲರೊಳ್ ನೆರೆ ।
ದರನಾಱಿಸುವಮೃತಮೆಂಬುದಂ ತೋಱಿಸುವಂ ॥
ತಿರೆ ಶಶಿಯುದಯದ ಕೆಂಪುಂ ।
ಕರಮೆಸೆದುದು ಬೞಿಕಮಳವಿಗಳಿದೆಳವೆಳಗುಂ ॥ ॥೯॥

ಮೃಗಲಕ್ಷ್ಮಂ ಸಂಜೆಗೆಂಪಿಂ [2]ಪ್ರದಿಮು[2]ದಯಿಸಿ ಸರ್ವೋರ್ವಿಗಾನಂದಮಂ ವಾ।ರ್ಧಿಗೆ ಪೆರ್ಚಂ ಮಾಡಿ ಮುನ್ನಂ ಬೞಿಕೆರ್ದೆ*ಗಱಿಯುಂ ತೋಱಿಯುಂ ಕಂಡು ಲೋಕಂ॥ ಬಗೆಗೊಂಡಾಲಂ ಮೊಲಂ ಪುತ್ತ್ರಲೆಯೆನುತಮಂ ಕೂರ್ತುರ್ ಕೈಗೈಯೊಳಿನ್ನುಂ । ಪೊಗೞ್ದಿ*ಪ್ಪರ್ ಭಾಪು! ಲೋಕಕ್ಕುಪಕರಿಸುವನೊಳ್ ದೋಷಮುಂ ಸ್ತುತ್ಯಮಲ್ತೇ ॥ ॥೧೦॥

ತಿಳಿಗೊಳನಲ್ಲಿ ತೋಱುವಸಿತೋತ್ಪಲಮಂ ಫಣಿರಾಜತಲ್ಪದೊಳ್ ।
ತೊಳಗುವ ಕೃಷ್ಣ[3]ಕಾಂತ[3]ವಪುವಂ ರತಿದೇವಿಯ ಕೇಳಿಗಿಟ್ಟನು ॥

ಪಾ.— 1. ಹೇಮ. ಗ॥　　2 ಪೊದೆದು. ಕ॥ ಗ॥　　3. ಕಾಂತಿ. ಗ॥ ಖ॥

ಣ್ಬುಳಿಕಿನ ಬಟ್ಟವಂಜರದ ಕೋಗಿಲೆಯುಂ ಗೆಲೆವಂದುದಿಂದುವುಂ ।
ಡಳವ ಕಳಂಕರೇಖೆಯುಮುರೇಂಗ್ರವಧೂಮುಖಪ[1]ತ್ರ[2]ವಿಭ್ರಮಂ ॥೧೧॥

ಇಂದುಪ್ರಾಲೇಯಶೈಲದ್ಯುನದಿ, ಶಶಿಶರನ್ಮೇಘಮುಕ್ತಾಂಬುಧಾರಾ ।
ವೃಂದಂ, ಜ್ಯೋತ್ಸ್ನಾಪ್ರವಾಹಂ, ಕವಿಸುದು, ವಿಧುಶಕ್ರೇಕ್ಷಿತಂ ಶೀತರೋಚಿಃ॥
ಕುಂದೋದ್ಯನ್ಮಂಜರೀನಿರ್ಗತನಿಬಿಡರಜಂ ಚಂದ್ರರುದ್ರಾಟ್ಟಹಾಸ ।
ಸ್ಪಂದಂ ಪ್ರೋದ್ಭಿನ್ನಸೋಮಾಮರಕರಟಶಿರೋವಾಂತಮುಕ್ತಾಚ್ಛವರ್ಷಂ॥

ಹಿಮರೋಚಿರ್ಮಂಡಲಂ ಕುಂಡಲಿತಕುಸುಮಕೋದಂಡಮಂ ಪೋಲೆ ಶೃಂಗಾ । ರಮುಮಂ ಭೂಲೋಕಮುಪ್ಪಂತುಟು ವಿರಹಿಗೆ ಶಶ್ವದ್ಧನುರ್ವೇದವಿದ್ಯಾ । ಭ್ರಮಮಂ ತೋಱಲ್ ಕಳಂಕಸ್ಮರನಿಸೆ ತುಱುಗಲ್ಗೊಂಡು ಪಾಯ್ವುಲ್ಲಸತ್ಕ್ಷಾ । ಸುಮಬಾಣಾಸಾರದಂತೇಂ ಸಾರಿದುದೊ ನವನೀಹಾರಕಾಂತಿಪ್ರವಾಹಂ ॥ ॥೧೩॥

ಎಲೆ ಶೃಂಗಾರಾರ್ಣವಂ ಸಗ್ಗದಿನಿೞಿದುದತಿಶ್ವೇತಮೆಂಬನ್ನೆಗಂ ಕ ।
ಟ್ಟಲೆಯಂ ಬೆಂಕೊಳ್ವವೋಲಣ್ದೆಸೆಯನನಿತುಮಂ ಜೋಱವೇಱಲ್ಲ ತಾರಾ ॥
ವಲಿಯಂ ತಳ್ಕೈಸುವಂತಾಗಸಮನನಿತುಮಂ ಪರ್ವಿದತ್ತೊರ್ಮೊದಲ್ ನೆ ।
ಯ್ದಿಲನೆಲ್ಲಂ ಚುಂಬಿಪಂತುರ್ವರೆಯನನಿತುಮಂ ಚಂದ್ರಪಾದಪ್ರವಾಹಂ ॥

ನೆಗಪುತ್ತುಂ ಬೆಮರಂ ವಿಯೋಗಿಜನದೊಳ್ ಕಾಂತಾಮುಖಾಂಭೋಜಮಂ ।
ನಗಿಸುತ್ತುಂ ಸ್ಮರಸೂರ್ಯಕಾಂತಶಿಳೆಯಂ ಸೂಸುತ್ತುಮೆತ್ತಂ ಚಕೋ ॥
ರಿಗಳೊಳ್ ತೃಷ್ಣೆಯನೆತ್ತುತುಂ ನೆಱಪುತುಂ ಪ್ರೇಯೋರಥಾಂಗಂಗಳಂ ।
ಪಗಲಂ ಪ್ರಟ್ಟಿಸುವಂತೆ ಪೊಕ್ಕಿರುಳೊಳೇಂ ಪರ್ಬಿತ್ತೊ ಚಂದ್ರಾತಪಂ ॥

ತವಕದಿನಪ್ಪಲುತ್ಪಳಿನಿಯಂ ಕರಮಾದುವು ಕೊಳ್ವ[2]ಭಿಕ್ಷವಾ[2] ।
ದುವು ಪೊಣರ್ವಕ್ಕಿಗಿಕ್ಕಿ ವನಜಾವಳಿಯಂ ತುಱಿಯಲ್ಕೆ ಪಾದಮಾ ॥
ದುವು ಸಲೆ ಕೇತುವಾದುವು ವಿಯೋಗಿಗೆ ಲೋಕದ ಕಣ್ಗೆ ದಾಮುಮಾ ।
ದುವು ಸುಧೆಯಾದುವೀಂಟುವ ಚಕೋರಿಗೆ ಚಂದ್ರನ ಚಾರುಕಾಂತಿಗಳ್॥

ಪಾ.— 1. ಪ್ರ. ಖ॥ 2. ಭೀಷುವಾ. ಗ॥

ಅಸುರೇಂದ್ರಾಶಾಪಥು ಚಂ ।
ದ್ರಮುಖಿ ಸುಧಾಬ್ಧಿ[1]ಸಿಂಧು[1]ರಸಧಾರೆಯನಂ ॥
[2]ದು[2]ಮುಳ್ ನಭಃಕೇಸರಮೆ ।
ಯ್ದ ಮುಗುಳ್ತಂತಡರೆ ತೊಳಗಿದುವು ತಾರಗೆಗಳ್ ॥ ॥೧೭॥

ಚಂದ್ರಿಕೆ ಸುರವರಕರಿಯೆನೆ ।
ಚಂದ್ರಂ ತತ್ಕರಿಯ ಕುಂಭಮೆನೆ ತಾರಗೆಗಳ್ ॥
ರುಂದ್ರನಯನಂಗಳೆನೆ ವಿಯ ।
ದಿಂದ್ರನದೇಂ ಭುವನ [3]ಜನಕೆ ಕಣ್ಗೊಳಿಸಿ[3]ದನೋ ॥ ॥೧೮॥

ಮುದಚಲಚಕೋರಚಂಚೂ ।
[4]ವಿದಳನದಿಂದಮೃತರಸದ ಪೊನಲಿಡುತುಂ ಸೂ ॥
ಸಿದ ಬೆಳ್ದಿಂಗಳ ತಿರುಳಂ ।
ಪದಿನಸವಳಮೆಸೆದುದೊಸರ್ವ* ಶಶಿಮಣಿವಿಸರಂ ॥ ॥೧೯॥

ಅತ್ತಬಿಲೆ ರಥಾಂಗಾಸುರ ।
ರಿತ್ತೀಂಟೆ ಚಕೋರದಿವಿಜನಾಯಕರುಂ ಸೂ ॥
ಸಿತ್ತಾ ಗಗನಸ್ಥಲಹರಿ ।
ಯೆತ್ತಿದ ವಿಧುಕುಂಭದಮೃತಕರಧಾರೆಗಳಂ ॥ ॥೨೦॥

ದಾಂಗುಡಿಯಿಟ್ಟುದಿಂಗಡಲ ಬೆಳ್ಪು ಕರಂ ಮೊಳೆವೋದುದಿಂದುಕಾಂ ।
ತಂಗಳ ಬೆಳ್ಪು ಮೂಡಿಮುದು ನೆಯ್ದಿಲ ಬೆಳ್ಪು ಮಡಲ್ತುದಚ್ಚಬೆ ॥
ಳ್ದಿಂಗಳ ಬೆಳ್ಪು ಬಳ್ಳಿಸರಿದತ್ತೀವೆಂಡಿರ ಕಣ್ಣ ಬೆಳ್ಪು ಸಾ ।
ಧಂಗಳ ಬೆಳ್ಪು ಪಬ್ಬಿದುವು ಬೆಳ್ಪಿನ ಬೆಳ್ಸರಿಯಿಂ ಸುಧಾಂಶುವಾ ॥೨೧॥

ಇದು ಮತ್ತೇನೆಂಬೆ ಬೆಳ್ದಿಂಗಳ [4]ಬೆಳತಿಗೆಯಂಪಂಸೆ ಪಾಲ್ಗತ್ತು ಸಾರ್ದ।
ಪ್ಪುದೊ ಮಲ್ಲೀಮಾಲೆಗೆತ್ತೇನೆಜಗಿವಪ್ಪುದೊ[4]ಭೃಂಗಂ ಬಿಸಭ್ರಾಂತಿಯಿಂದಂ ॥

---

ಪಾ.— 1. ಸಿಂಧು ಕ॥ ಗ॥ 2 ತು. ಗ॥ ಖ॥ 3. ಜನಪಕಣ್ಗೊಳಿಪ್ಪಿ. ಖ॥
4. ಸಾರ್ದಪ್ಪುದುಮಲ್ಲೀಮಾಲೆಯೊಂದಾರ್ದೆಜಗಿದಪ್ಪುದು. ಖ॥

ಕುರ್ದುಕಲ್ಕೈಗ[1]ಯ್ಯೊಳಾ[1]ರೈದಪುದಿಭಕಳಭಂಸಾಂದ್ರಚಂದ್ರಾಂಶುವಂ ಜಾ
ಱಿ ದುಕೂಲಂ ಲೀಲೆಯಿಂದಂ ತೆಗೆದಪುದೊ ಕುಚಾಗ್ರಕ್ಕೆ ಕಾಂತಾಕದಂಬಂ ||

ನೆರೆದು ಚಕೋರಪ್ರಕರಂ |
ಖರಚಂಚುವಿನುಡಿದು ತಿನೆ ಸುಧಾಕರಕಿರಣಾಂ ||
ಕುರನಿಕರಮನಮರ್ದಿನ ಸೋನೆ |
ಸುರಿದಪುದೆನೆ ಪಸರಿಸಿತ್ತು ಪೊಸವೆಳ್ದಿಂಗಳ್ || ||೨೩||

ಇಂದು ಜಡನಿಧಿಯ ಬಸಿಱೊಳ್ |
ಬಂದುದು ಪುಸಿ ಕಾಣ ಪೂರ್ಣಚಂದ್ರನ ಬಸಿಱೊಳ್ ||
ಬಂದುದೊ [2]ಪೇಱಿಂ[2]ಗಡಲೆಂ |
ಬಂದದಿನೇಂ ಪಸರಿಸಿತ್ತೊ ಪೊಸವೆಳ್ದಿಂಗಳ್ || ||೨೪||

ಎಳವೆಳ್ದಿಂಗಳ ಬಳೆದು |
ಜ್ವಳಿಕೆಯಿದೇಂ ಕರಮೆ ಕೂರ್ತು ಕಣ್ಗಾಣದ[3]ರ್ಗೆಂ[3] ||
ಪೊಳಪಿನೊಳತನುವನೆ ತಳಾ |
ಮಳಕಂ ಮಾಡಿದುದು ಬಗೆವೊಡಚ್ಚರಿಯಲ್ತೇ || ||೨೫||

ವ|| [4]ಎನೆ[4] ಚೆಲ್ವುವಡೆದ ಚಂದ್ರೋದಯದೊಳ್ ಚಂದ್ರೋದಯಂ ಪುರ ಪುರಂಧ್ರೀಜನದ ಚಂದ್ರಿಕಾಮಹೋತ್ಸವಮಂ ನೋಡಲುತ್ಸುಕನಾಗಿ ನಾಗರಿಕವಿಟವಿದೂಷಕಪೀಠಮರ್ದಕರುಮತಿಚತುರವಿಟನಪ್ಪ ಮಕರಂದನುಂಬೆರಸರಮನೆಯಂ ಪೊಱಮಟ್ಟು ವೇಶ್ಯಾವಾಟಮಂ ಮುಟ್ಟುವರೆ || ||೨೬||

ಮುಗುಳ್ಗಳ ಕಂಪಿದಚ್ಚನನೆಗಂಪಿದು ಪೂಗಳ ಕಂಪಿದಿಲ್ಲಿ ಮ |
ಲ್ಲಿಗೆಗಳ ಕಂಪಿದುಬ್ಬರಿಪ ಜಾತಿಯ ಕಂಪಿದು ಬೆಱೆವೇಱೆ ಸಂ ||
ಪಗೆಗಳ ಕಂಪಿದೆಂಬವೊಲಳಿಸ್ವನಮೊಪ್ಪಿರೆ ಬಂದು ಕಂಪನೋ |
ಲಗಿಸಿದುದೆತ್ತಿ ಭೂಪತಿಗದೇನೆಲರೋ ಪೊಸಮಾಲೆಗಾಱನೋ || ||೨೭||

ಪಾ— 1. ಯ್ಯಲಾ. ಖ|| 2. ಬೆಳದಿಂ. ಗ|| 3. ರ್ಗೇಂ. ಕ||ಗ||ಖ|| 4. ಇಂತು. ಖ||

ವ ॥ ಆತಣ್ಣೆಲರೆಂಬ ಕಂಪಿನ ಕಡಲ[1]ನೀಸಿಯುಂ[2] ಬೞಲದೆ ಬಂದು,

ನೆನೆದರ ಚಿತ್ತಮುಂ ನೆರೆಯೆ ಕಮ್ಮನೆ ನೋೞ್ಪರ ಕಣ್ಣ ಬೆಳ್ಪು ಕ |
ಮ್ಮನೆ ಮಿಗೆ ಮಾತನಾಡುವರ ಮೆಲ್ನುಡಿ ಕಮ್ಮನೆ ಮೆಯ್ಗಳೆಯ್ದೆ ಕ ॥
ಮ್ಮನೆ ಬೆಸೆ ಕೂಱೆ ಕಮ್ಮನೆ ಕರಂ ನವಕೌಮುದಿ ಕಮ್ಮನಾಗೆ ಕಂ |
ಪಿನ ಪೊನಲೆತ್ತಲುಂ ಪರಿವ ಪೂವಿನ ಸಂತೆಯನೆಯ್ದಿದಂ ನೃಪಂ ॥೨೮॥

ವ॥ ಎಂದು ಕಾಮನ ಕೆಯ್ಪೊಡೆಯನೆತ್ತುವಂತೆ ಬಣ್ಣದ ಬಾಸಿಗಂಗಳಂ, ಮೀನಕೇತನಮನೆತ್ತುವಂತೆ ಬಿಳಿಯಬಾಸಿಗಂಗಳಂ, ಸ್ಮರಶರಚಾಪಮನೆತ್ತುವಂತೆ ಕಿಸುಗಣಿಗಿಲೆಯ ಪಸುರ ಬೆರಕೆವಾಸಿಗಂಗಳಂ, ನನೆವಿಲ್ಲನೆತ್ತುವಂತೆ ನನೆಯ ನಿಡಿಯದಂಡೆಗಳಂ, ಅಲರಂಬನಂಬಿನ ಮೂಡಿಗೆಯನೆತ್ತುವಂತೆ ಪೊಸಗೇದಗೆಯ ಪೂಗಳಂ, ಕೈಗೆಯ್ವ ಮನಸಿಜಂಗೆ ಮುತ್ತಿನ ಸರಮನೆತ್ತುವಂತೆ ಮುಗುೞ ಮಾಲೆಗಳಂ, ಚಿತ್ತಜಂ ಬರೆವ ಚಿತ್ರಪಟಮನೆತ್ತುವಂತೆ ನಾನಾವಿಧಬಂಧಬಂಧುರಂಗಳಪ್ಪ ಪೊಸಪೂಮಾಲೆಗಳನೆತ್ತುವ ಮಾಲೆಗಾರ್ತಿಯರ ಕಟಾಕ್ಷಕುಸುಮಮಾಲೆಗಳಂ ಸೌಂದರ್ಯಧನದಿಂ ಮಾಱುಗೊಳುತ್ತರಸಂ ಬರೆವರೆ ಪೂವಿನ ಸಂತೆಯಿಂ ಪೊಱಗೆ,

ತೆಗೆಯೆ ಚಕೋರಿ ಕರ್ಚಿ ಶಶಿಮಂಡಲದಿಂದಮೆ ಕಿೞ್ತು ಬಿಟ್ಟ ರ |
ಶ್ಮಿಗಳೆಡೆಯಂತೆ ತೋಱಿದುವು ನುಣ್ಗಱಿಯಾಕೆಡೆದುನ್ಮಯೂಖಮಾ ॥
ಲೆಗಳನೆ ಚಂದ್ರಮಂಗೆ ಕುಡಲೆತ್ತಿದವೋಲೆಸೆದಿರ್ದರಲ್ಲಿಗ |
ಲ್ಲಿಗೆ ಮಿಗೆ ತೋರಮಲ್ಲಿಗೆಯ ಮಾಲೆಯನೆತ್ತಿದ ಮಾಲೆಗಾರ್ತಿಯರ್ ॥೨೯॥

ವ ॥ ಆಕೆಗಳ ಕೈಯ ಮಾಲೆಯುಂ ಮಱುಮಾಡಿಕೊಂಡು ಬಾಯೆಂದರಸಂಗೆ ವಿದೂಷಕನಿಂತೆಂದಂ:— ॥೩೦॥

ಅರಸುತನಕ್ಕೆ ಮೆಚ್ಚಿ ನಿನಗೀಯದೊಡೀವರೆ ತಮ್ಮ ದೀರ್ಘಕೇ |
ಕರಸಿತಮಾಲೆಯುಂ ಪಿಡಿದ ಮಾಲೆಯ ಕಂಪನೆ ತಮ್ಮ ಕುಂತಳ ॥
ಕ್ಕೆರದಳಿ ತಮ್ಮ ಚೆಲ್ವಿಕೆಯನೀಯದೊಡೀಯದ ಸುಯ್ಗೆ ಗೆಲ್ಲಮಂ |
ಸುರಭಿಸಮೀರಣಂ ಬೆಲೆಯನೀಯದೊಡೀಯದ ಮಾಲೆಗಾರ್ತಿಯರ್ ॥೩೧॥

ವ॥ ಎನೆ ಮಾನವಮವನಂ ಮುಗುಳ್ನಗೆನಗುತ್ತುಂ ಸೂಳೆಗೇರಿಯುಂ ಪು
ಗುತರ್ಪಾಗಳ್,

[1]ಸಮುದಂಚದ್ಗ್ರಹ[1]ಷಡ್ಜಷಟ್ಸ್ವರಣಮಂದ್ರನ್ಯಾಸಸಂಯುಕ್ತ್ರೀರವಮ ।
ಧ್ಯಮತಾರಂ ಮೃದುತಾಡಿತ[2]ಪವನಸಪ್ರೋದ್ಭಿನ್ನ[2]ಪ್ರಸೂನಂ[2] ಸಮಂ ॥
ಚಮ[3]ಚಂ[3]ಚತ್ಕಳಕಂಠಕಂಪಿತರುತಂ ತಾನೆಂಬ ಹಿಂದೋಳರಾ ।
ಗಮೆ ತಾನಾದ ವಸಂತಮೇನೆಸೆದುದೋ ಸಂಪೂರ್ಣಸೋಮೋದಯಂ ॥

ವ॥ ಈರಾಗಮಾರ್ಗಂ ಹಿಂದೋಳರಾಗಾಂಗಸಂಭವಮಪ್ಪ ದೇಶೀಯಹಿಂ
ದೋಳಮಿದು ಶೃಂಗಾರಯುಕ್ತಮಪ್ಪುದಱಿಂ ಶೃಂಗಾರಕಾರಾಗೃಹಮಪ್ಪ ನಿನ
ಗೆ ಕೇಳಲ್ತಕ್ಕುದೆಂದು ರೂಪಕಂದರ್ಪದೇವನೊಳ್ ಮಕರಂದಂ ನುಡಿ
ಯುತ್ತುಂ ಬರೆ ಮತ್ತೊಂದುತ್ತುಂಗಮತ್ತವಾರಣದೊಳ್,

ಶೃಂಗಾರಾರ್ದ್ರಂ ಕಕುಭಜನಿತಂ [4]ಧೈವತಂ ಸಂಗ್ರಹನ್ಯಾ ।
ಸಾಂಗಂ ತಾರಂ[1]ಸರಿಗಮಪಧನ್ಯುತ್ತರಾಭೋಗವರ್ಧ ॥
ನ್ಯಂಗಂ ಸಂಕಂಪಿತಮಿದಿವಱೊಳ್ ಮಧ್ಯಮಂ ಮಂದ್ರಮೆಂಬೀ ।
ಪಾಂಗಿಂ ವೇಳಾವಳಿಯನೊಲವಿಂ ಪ್ರೌಢೆ ಪಾಡುತ್ತುಮಿರ್ದಳ್ ॥೩೩॥

ವ॥ ಅದಂ ಕೇಳ್ದೀಯಾಳಾಪಿಸುವ ವಿದಗ್ಧೆ ವಿಪ್ರಲಂಭವೈಶ್ವಾನರದಗ್ಧೆ
ಯೆಂಬುದನೀರಾಗಪ್ರಯೋಗಮೆ ಪೇೞ್ದಪ್ಪುದೆಂದು ಸಂಗೀತಗಂಗಾಧರಂ ಸಂ
ತತಂ ಮೆಚ್ಚುತ್ತೆ ಪೋಗೆ ಮುಂದೊಂದು ಮಣಿಸುತ್ತವಾರಣದ ಮುಂದಣ ಪೊ
ಸಬೆಸದ ಮಣಿಮಯಸ್ತಂಭಮಂ ತ್ರಿಭಂಗಿಯಿಂ ಸಾಲಭಂಜಿಕೆಯಂತೆನೆಮ್ಮಿ,

ಊಱಿ ಕುಚಾಗ್ರದೊಳ್[5]ಸೊರೆ[5]ಯನೆತ್ತಿದ ಕೆಂದಳದಿಂದಮಾಂಕಿ ಪೊ ।
ಯ್ದೇಱಿ ಬೆರಲ್ಗಳಿಂದಿಱಿಯೆ ತಂತ್ರಿಗಳಂ ಮಿಡಿದಿಂಪು ರಾಗಮಂ ॥
ಬೇಱೆ ಲಯಕ್ಕೆ ಬೀತೆ ಬಹುಳಕ್ರಿಯೆಗಳ್ ಜತಿಗೂಡೆ ಧಾತು ಮೈ ।
ದೋಱಿದ ಮೆಯ್ಯೊಳಾಲವಣಿಯಿಂ ವನಜಾನನೆ ಬಾಜಿ[6]ಸೋ[6]ಜೆಯಿಂ ॥೩೪॥

---

ಪಾ— 1. ಸಮುದಂಸಂಗ್ರಹ. ಖ॥; ......ಸದ್ಗ್ರಹ. ಗ॥ 2. ಪ್ರಸನ್ನಂ. ಖ॥
3. ಸಿ. ಖ॥; ಸ ಗ॥ 4. ಧೈವತಾಂಸಗ್ರಹಂ ನ್ಯಾಸಂ ಸತ್ತಾರಂ ಗ॥
5. ಸೆರೆ. ಗ॥ 6. ಪೋ. ಗ॥

ವ ॥ ಅದಂ ಕೇಳ್ದು ಮೆಚ್ಚುತ್ತುಂ ಪೋಗೆವೋಗೆಮುಂದೆ ಚಂದನದ ಚೌಕಿಗೆಯ ಮುಂದೆ ಮರಕತದೊರಲೊಳ್ ಮುತ್ತಿನಕ್ಕಿಯಂ ಪೊಯ್ದು ಕನಕದೊನಕೆಯಂ ನಳಿತೋಳ್ಗಳಿಂ ನೆಗಪಿ,

( ತ್ರಿಪದಿ )

ಅಂಗಜನೈದು ಶರಂಗಳ ಬಂದ ಬ ।
ನಂಗಳ ಪುಱಿಲ ತಳಿರುಯ್ಯಾಲಚ್ಚವೆ ।
ಳ್ದಂಗಳ ಮೇಲೆ ಸಿರಿ ನಿಲ್ಕೆ ॥ 1

ಮನಮನಂಟುವ ರೂಪು ದನಿ ನಗೆ ಮೆಲ್ಪು ತಂ ।
ಪನುಗುಣವುಳ್ಳ ವಧುವಿರೆ ಮತ್ತೆ ಪೂ ।
ವಿನ ಸರಲಬೇಕೆ ಮದನಂಗೆ ॥ 2

ಜಾತಿ ಸೂಳೆಗೆ ರಣಭೀತನ ಪುಸಿನುಡಿ ।
ಮಾತನ ಖಳನ ಕೆಳೆಯನ ಬದಗನ ।
ಬೂತಿನ ಮಾತು ದಿಟಮುಟ್ಟು ॥ 3

ಪತ್ತಿದ ಗಂಡರ ಚಿತ್ತವ ಕಿಡಿಸಿಯು ।
ದಿತ್ತುದೇ ಕೋಟಿ ತನಗೆಂಬ ಸೂಳೆಯು ।
ಹಿತ್ತಿಲ್ಲಿರದೆ ಸುರಭೂಜ ॥ 4

ಎಱಗಿಸುವುದಮಗೆಟ್ಟು ಪೆಱರ್ಗ* ತಾ ।
ನೆಱಗೆ ಪೋಗೆ ಪೋಗಿ ಮೂಗಱಿವಃದರ ।
ತೆಱನಪ್ಪದೆಲಗೆ ಬೆಲೆವೆಣ್ಣೆ ॥ 5

ಬೇಟದ ಪದನೆಂದು ಕೂಟದ ಮುದವೆಂದು ।
ನೋಟದೊಳ್ಗಂಡರಱಿವೊಡೆ ಹಡಹಿನ ।
ತೋಟಿಯೇಕೆಲಗೆ ಬೆಲೆವೆಣ್ಣೆ ॥ 6

ಕಂಪೋಡಿದಲರ್ಗ*ಳನಿಂಪೋಡಿದೊಲುಮೆಯುಂ ।
ಸಂಪತ್ತು ಪೋದ ಬೋಜಗನ ಪಿಡಿದಿರ್ಪ ।
ಗಾಂಪು ನಿನಗೇಕೆ ಬೆಲೆವೆಣ್ಣೆ ॥ 7

ಬಿಯಕಾರನೊಪ್ಪುವ ಪ್ರಿಯತಮನಾಗೆ ಪೆ ।
ರ್ಮೆಯ ಬೆಳಸು ಫಳವಾಪೆಣ್ಣು ನೋಂತ ನೋಂ ।
ಪಿಯ ಫಲಮೊಲಗೆ ಬೆಲೆವೆಣ್ಣೆ ॥ 8

ನೆಲೆಮೊಲೆಯುಳ್ಳನಂ ನೆಲೆಯಕ್ಕು ಪೋಪವರ್ಗೆ ।
ಎಲೆ ಪಣ್ತು ಬಿರ್ದ ಬಟ್ಟೆಯ ಮರನಂತೆ ।
ಮೊಲೆ ಬಿರ್ದ ಬಱಿಕೆ ಬೆಲೆವೆಣ್ಣಿರ್ ॥ 9

ಪರಿಹಾಸಮೊಪ್ಪಮಾದರಮೊಲೆ ಗೀತಮ ।
ಕ್ಕರಗೊಟ್ಟೆಯಲ್ಲದಿರೆ ನಾಡ ಕೋಟಲೆಯ ಕೊ ।
ಟ್ಟರಮ ಸೂಳೆವನೆಯಲ್ತು ॥ ॥೩೫॥

ವ॥ ಎಂದಿರ್ವರೊಂದಾಗಿ ಸೂಳೆಸಿದ್ಧಾಂತಮನೊನಕೆವಾಡಂ ಮಾಡಿ ಪಾಡುವ ಪೆಂಡಿರ ವಿನೋದಕ್ಕೆ ವಿನೋದನದೀಸಮುದ್ರಂ ನಸುನಗುತ್ತುಂ ಪೋಗೆವೋಗೆ

ಕತ್ತುರಿಯಡ್ಡಬೊಟ್ಟೆಸೆಯೆ ಮುತ್ತಿನ ಮೂಗುತಿಯೊಪ್ಪೆ ಚುಂಚುಗಳ್ ।
ಕತ್ತರಿವೀಲಿಯಂ[1]ತಲೆಯೆ[1] ಜೋಲ್ದಿರೆ ಚೊಲ್ಲೆಯಮೊರ್ಮೆ ನೀಱಿರಂ ॥
ಸುತ್ತುತುಮೊರ್ಮೆ ಕನ್ನಡಿಯನೀಕ್ಷಿಸುತುಂ ಕಡೆಗಣ್ಣೊಳಾಗಳಂ ।
[2]ದೊ[2]ತ್ತಿಗೆ ನಿಂದ ವೃತ್ತಕುಚೆಯಂ ನಡೆ ನೋಡಿವನಾಕುಮಾರಕಂ ॥೩೬॥

ವ ॥ ಆಗಳೊರ್ವಳರಸನುಮಂ ಮೊಲೆಯೊಳೊಱಸಿ ಮಲೆದು ನೋಡುತ್ತುಂ,

ದುಗುಲಮನುಟ್ಟು ತೊಟ್ಟು ಪೊಸಮುತ್ತಿನ ಚಂದನದಣ್ಪನಿಕ್ಕಿ ಮ ।
ಲ್ಲಿಗೆಯ ಸರಂಗಳಂ ಮುಡಿದು ಚಂಪಕಮಾಲೆಯನೆತ್ತಿ ಮೇಲೆ ತುಂ ॥
ಬಿಗಳೊ[3]ಲೆ[3]ದಾಡಪಂತಱಿಯಲಾಗದವೋಲ್ ನವಚಂದ್ರಿಕಾಚ್ಛವೀ ।
ಚಿಗಳೊಡಗೂಡಿ ಪೋದಳಭಿಸಾರಿಕೆ ಮುತ್ತಿನ ಬೊಂಬೆಯೆಂಬಿನಂ ॥೩೭॥

ವ॥ ಆ ಪೋಪಳನರಸಂ ಮಕರಂದನಂ ತುಱಿಸಿ ತೋಱುತ್ತುಂ ಪೋಪಾಗಳ್,

---

ಪಾ— 1. ತೆಸೆಯೆ. ಖ॥ 2. ತೊ. ಖ॥ 3. ಗೆ. ಗ॥

ನೆರೆವಳಿ ಪಾಱುವಂತಿರೆ ಕುರುಳ್ ಮೊಲೆಗಳ್ ಪೊಣರ್ವಕ್ಕಿ ಪಾಱುವಂ ।
ತಿರೆ ಪೊಳೆವಕ್ಷಿಗಳ್ ಚಟುಚಕೋರಯುಗಂಗಳ್ ತನ್ನು ಪಾಱುವಂ ॥
ತಿರೆ ಶಿಖಿ ಪಾಱುವಂತಿರೆ ಬಳಲ್ಮುಡಿ ತಾನಲರಂಬು ಪಾಱುವಂ ।
ತಿರೆ ಮಿಗೆ ಕೀಱು ಪಾಱು ಗಗನೇಚರಿಯಂತೊಲೆವುಯ್ಯಲಾಡಿವಳ್ ॥೩೮॥

ಬೀಱುವುದೊಂದೆ ಬಾಯಿನವು ಬಾಲಕಿ ಬಾಲಕಿಯರ್ಗೆ ಗಾಡಿಯುಂ ।
ನೀಱರ ಕಣ್ಗೆ ಸೋಲ್ತು ಸುತಿಗಿಂದೊಳವುಂ ನನೆವಿಲ್ಲ ಪಾಂಗವುಂ ॥
ಬಾಱನೆಯುಂಬನಾಸ್ಯರುಚಿಯುಂ ನವಚಂದ್ರಿಕೆಗಿಂಪನಾಳ್ದು ತಂ ।
ಪಾಱದ ಬಾಯ ಕಂಪನೆಳವುಂಬಿಗೆ ಬೀಱುತುವುಯ್ಯಲಾಡಿವಳ್ ॥ ॥೩೯॥

ವ॥ ಮತ್ತಮೊರ್ವಳ್

ಇದು ನಿನ್ನೀಯೆಣನೆನ್ನೀಕ್ಷಣಕೆ ಸೆಣಸಿ ತಾಂ ಬೆಚ್ಚಿ ನೋೞ್ಪೊಂದು ದರ್ಪ । ಕ್ಕಿದು ನಿನ್ನೀಯಾಲವೆನ್ನೀಯಧರದಳದೊಳಾದೀರ್ಷೆಯಿಂ ಪಣ್ತ ಗರ್ವ ॥ ಕ್ಕಿದು ನೀನೆನ್ನಾಸ್ಯದೊಳ್ ಮಚ್ಚರಿಸುವ ಮಱುಕಕ್ಕೆಂದು ಕಾಲ್ಗಲೊಳೀವಂ । ಗದೆ ಚಂದ್ರಂಗುತ್ಪ್ರಹಾರಂಗಳನೊಬೆದೊಲವಿಂದುಯ್ಯಲಾಡುತ್ತುಮಿರ್ದಳ್ ॥ ॥೪೦॥

ವ॥ ಮತ್ತಮೊಂದೆಡೆಯೊಳೆಳಮಾವಿನ ತಳಿರುಯ್ಯಲನೇಱಲಂಜಿ ನಡುಗುವ ನಲ್ಲಳನಪೂರ್ವರೂಪಸೌಂದರ್ಯಸದನಂ

ಇವಳೀಲೋಚನವೆನ್ನ ಬಾಣದಿವಳೀಭ್ರೂವೆನ್ನ ಪೂವಿಲ್ಲ ಮಾ।
ಯ್ದಿವಳೀಸೋರ್ಮುಡಿಯೆನ್ನ ಕೇತನದ ಚೆಲ್ವಂ ಕೊಂಡೊಡೇನೊಂದುದೋ
ಷವೆ ಎನ್ನೊಪ್ಪಳ ರೂಪನೀಕೆ ಗೆಲಲೇಕೆಂದಂಗಜಂ ಕಟ್ಟಿ ತೂ।
ಗುವವೊಲ್ತೂಗಿದನುಯ್ಯಲೇಱಿಸಿ ವಿಟಂ ವಿಭ್ರಾಂತೆಯಂ ಕಾಂತೆಯಂ ॥೪೧॥

ವ॥ ಆಕೆಗಳನಾಕುಮಾರಂ ನೋಡುತ್ತೆ ನಡೆಯೆ,

ಕುಡುವುರ್ವಿಂ ಕೊಂಕುತುಂ ಕಾಮುಕರ ನಿಕರವಂ ನೀಱರೊಳ್ ಸೋಲವುಂ ಸಾ । ಲಿಡುತುಂ ಬಲ್ಗೈತದಿಂ ಬಾಯ್ದೆಱೆಯಿನುಗುವ ಕೆಂಪಿಂ ಮು

ಸೋರ್ದಾಗಮುಂ ಸುಂ ॥ ದಿಹುತ್ತಂ ಕಂಗಪ್‌ನ್ಕಾಲಾಸಲನೆ ಪರಿವಪ್ರೋಲ್
ನಿರ್ಲ್ದವಾಂಗಂಗಳಿಂ ಕಿ। ಬ್ಬಿದುತ್ತಂ ಕಾಮಾರ್ತನಚೇತ್ರೋವಿಪಿನದೊಳದಿ
ರಂ ಪೋರ್ದಪ್ಪುತ್ತಕಾಂತಾಜಾದಂಬಂ ॥ ॥೮೨॥

ವ॥ ಎಂದು ಕಾವುದೀಸ್ರವೋರ್ದ[1]ಮಂ[1]ತ್ರಾಯಾತಮುವನನುದಾವೇಶಹರಿ
ಭ್ರಾಂತಮೆಂಪು ಮಾನಪಮುವನಂ ಮಕರಂದನೊಳ್ ನುಡಿಯುತ್ತುಂ ಪೋಗೆ

ಸ್ಮರಕೇತುಶ್ರೀಗೆ ಮಾನಂ ನಿಱಿಸಿದ[2] ಕಡೆಗಣ್[2] ಪುಷ್ಪಬಾಣಕ್ಕೆ ಚಿತ್ತಂ।
ಬಿರಿವನ್ನಂ ಕೊಳ್ವ ಕೂರ್ಪಂ ಕಲಿಸಿದ ಕಡೆಗಣ್ಣಾಮಬಾಪತ್ವಮುಂ ಕ ॥
[3]ಬೊರ್ರೆಯಲ್‌ಕೂರ್ತಿತ್ತ[3]ಪುವರ್ಂಗಜವಿಜಯಸಹಾಯತ್ವಮುಂ ಚಂದ್ರಮಂ
ಗಂ। ಬರಲಿತ್ತಾಸ್ಯೇಂದುಬಿಂಬಂ ತಮಗೆನೆ ಕರಮೊಪ್ಪಿತ್ತು ವೇಶ್ಯಾಸಹಸ್ರಂ॥

ವ॥ ಅಲ್ಲಿಯೊರ್ವಳ್ ಕೆಳದಿಯ ಕಾಲ ಮೇಲೆ ಕವಿದು ಬಿರ್ದು,

ನೆಱೆ ಬಂದೀಮಧುಮೆನ್ನನಂಗಭವನೆನ್ನಂ ಚಂದ್ರನೆನ್ನಂ ದಲೆಂ ।
ದಱಿಯೆಂ ಕೇವಳನೆನ್ನನೆಂದಱಿಯದಂದೀಗಳ್ ವಿಯೋಗಾರ್ತೆಯಿಂ ॥
ನೆಱೆ ಬಂದೀಮಧುವೆನ್ನನಂಗಭವನೆನ್ನಂ ಚಂದ್ರನೆನ್ನಂ ಕೊಲಲ್ ।
ತಱಿಸಂದಿರ್ದಪರಾತನೊಳ್ ನೆರಪು ನೀಂ ಶ್ರೀರೂಪಕಂದರ್ಪನೊಳ್ ॥

ವ ॥ ಎಂಬುದುಮದಾಕೆ ನಗುತ್ತಿಂತೆಂದಳ್:—

ನಗೆಗಣ್ಣಿಂಪೋಲ್ತುದೆಂ[4]ದೆನ್ನಯ[4]ಮೊಗರಸಮುಂ ಪೋಲ್ತುದೆಂ[5]ದೆತ್ತಿಕಂಪಂ।
ಮಿಗೆ ಸುಯ್ಯಂ[5]ಪೋಲ್ತುದೆಂದೇಕೆ[6]ಮುಗಮುಗಿಪ[6] ಪೂವಿಂಗೆಚಂದ್ರಂಗೆ ತೆಂಗಾ
ಳಿಗೆ ಕಾಯ್ದೀಸಿನ್ನನಾ ಪೂಗಳೆ ಮನಸಿಜನಂಬಾಗಿಯಾಚಂದ್ರನಲ್ತೇ
ಬಗೆದುಂ ಕಿಚ್ಚಾಗಿಯಾತೆಂಬೆಲರೆ ಮುನಿದು ನಂಜಾಗಿ ಕೊಂದಪ್ಪುವೀಗಳ್ ॥

ವ॥ ಎನೆ ನಾಗರಿಕವಿದಗ್ಧಮುಗ್ಧೆಯ ಮನನುನಾಱಿಸುವ ನೆಪದಿನೀಕೆ
ಯ ರೂಪುಮುಂ ನಿನ್ನ ಸೊಬಗುಮುಂ ಪೊಗೆಟ್ದಿಪ್ಪಳೆಂದರಸನಂ ನಾಣ್ಚಿಸಿದಂ.

---

ಪಾ— 1. ಯಂ. ಗ॥ 2. ನಯನಂ. ಖ॥ 3. ಬಿರಿಯಲ್ ಕೊಂಕಿರ್ದ. ಖ॥
4. ದೀಕೆಯ. ಖ॥ 5. ದೆಂದಾಡಲೆಂದೀಕೆಗೆಸೂಯಂ. ಖ॥
6. ಗಮಿಸುಗುವ ಖ॥ ಗ॥

ಮತ್ತಮೊರ್ವಳ್ ಮಾತುಮಾತಿಂಗೆ ಕೌಮುದೀವ್ಯಾವರ್ಣನಮಾಗಿ ತನ್ನ ಗಂಡಂಗಿಂತೆಂದಳ್:—

ಪಗಲೆಂದುಂ ತಲೆಯೆತ್ತಲಣ್ಮಳೆನಸುಂ ಚಂದ್ರಂಗೆ ಕೂರ್ತಂತೆ ಪ ।
ತ್ತುಗೆಗುಂದಳ್ ನಿಸೆಯಪ್ಪುದುಂ ಪರಿದು ದುಗ್ಧಾಂಭೋಧಿಯೊಳ್ ಕೂಡುವಳ್॥
ನಗುವಳ್ ನೈದಿಲೊಳ್[1]ಅೞ್ದು[1]ಚುಂಬಿಸೆ ಚಕೋರಂಗೊಲ್ವಳೊಲ್ವಾಸೆಯಿಂ ।
ಪುಗುವಳ್ ಕೌಮುದಿಯೆಂಬ ಪ್ರೌಢೆ ಪೊಸವೆಣ್ಣೇನೆಂಬ ನಾಣ್ಗೆಟ್ಟಳೋ॥೪೬॥

ವ॥ ಅದಂ ಕೇಳ್ದು ವಿದೂಷಕನೀಕೆಯ ಮನಮುಮಿನ್ನ ಪೆಂಡತಿಯ ಮನಮುಮೊಂದೆಯೆಂದಾತನ ಮೊಗಕ್ಕೆ ಮುಗುಳ್ನಗೆಯನಿತ್ತು ಪತ್ತಿಂ ದೆಡೆಯೊಳೊಂದೆ ನೋಟದೊಂದೆ ಮೈಯೊಂದೆ ಮನದಿಂತ್ರಂದಿಗರ್ ಮಂದ ಭಾಗ್ಯೆಯರ್ ನಿನಗೇಂ[2]ಪೆರೆಂದು[2]ನೊಂದು ನುಡಿದ ನಿಜವಲ್ಲಭೆಗೆ ತನ್ನ ಮುನ್ನು ಡಿದ ಪೊಲ್ಲಮೆಯಂ ತೊಡೆಯಲೆಂದತಿಚತುರನಿಂತೆಂದಂ:—

ತರಳಾಕ್ಷಿದ್ವಂದ್ವಮೊಂದೊಂದೆರಡೆ ದರಚಳತ್ಪಾಂಗ[3]ಮೊಂದೊಂದೆ ನೋ
ಡಲ್ಕೆ[3]ರಡೇ ಚೆಲ್ವೊಳ್ಪ್ರಿಯೊಂದೊಂದೆರಡೆ ಸರಳಮೀಂದೋರ್ಲತಾಯುಗ್ಮ
ಮೊಂದೊಂ । ದೆರಡೇ ತಣ್ಪಿಂಪಿನೊಂದೊಂದೆರಡೆಸೆವ ನತಭ್ರೂಯುಗಂ
ನೋಟ್ಪೊಡೊಂದೊಂ । ದೆರಡೇ ಚಾರ್ವಾಸ್ಯಮೊಂದಾದೊಡಮೆರಡೆ ಲಸ
ಚ್ಚುಂಬನಂ ಚಂಡಿ ನಿನ್ನಾ ॥ ॥೪೭॥

ವ॥ ಮತ್ತಮೊರ್ವಳ್ ವಾಸಕಸಜ್ಜಿಕೆ

ಮುಕುಳಂ ಮಾದಲರಾಯ್ತು ಮೆಯ್ಸರಿಸಿನಂ ಕೆಂಪೇಱಿತೀಱೆಂದ ದೀ ।
ಪಿಕೆಯುಂ ಕರ್ಗಿದುವಟ್ಟದಿನ್ನಿನಿಯನಿನ್ನುಂ ಬಾರನೇಕೆಂದು ದ ॥
ರ್ಪಕದಾವಾನಲದಗ್ಧತುಂಗಕುಚಶೈಲಾಗ್ರಕ್ಕೆ ಸುಯ್ದುಂಬಕಾಂ ।
ಬುಕಣಾನೀಕಮನಿಕ್ಕಿದಳ್ ಮದನಮೋಹಾಸಾರಮೆಂಬಂತೆವೋಲ್ ॥೪೮॥

ವ॥ ಮತ್ತಮೊರ್ವಳ್ ಪೊಸವೇಟಮಂ ಪಸರಿಸುವಂತೆ ಬಿರಿದ ಮಲ್ಲಿಗೆಗಂ ಬಳೆದ ಬೆಳ್ದಿಂಗಳ್ಗಂ ಕರೆವ ಕೋಗಿಲೆಗಂ ತೀಡುವ ತೆಂಗಾಳಿಗಂ ಮತಿ ಮಱೆದಿಂತೆಂದಳ್:—

---

ಪಾ— 1. ಳೊಲ್ದು. ಖ॥ 2. ಗೆಯ್ವರೆಂದು. ಖ॥ 3. ಮೊಳ್ಕೆಯ್ದೊಂದೆ. ಕ॥ ಗ॥

ನೆರೆವಳ್ ತಂಗಿಯನಟ್ಟೆ ತಾನೆ ಬರಲೊಲ್ಲಂ ಲಜ್ಜೆಯಿಂದಾತನಂ ।
ಕರೆಯಲ್ ವೈಶಿಕವೆಂದಪಂ ಸಖಿ ಸರಸೋಕ್ತಿಂ ಗಡಾ ನಲ್ಲನಂ ॥
ಬರಿಸೆನ್ನಲ್ಲಿಗೆ ತೋಱರಮಲ್ಲಿಗೆಯೊಲೇ ಬೆಳ್ದಿಂಗಳೇ ನಿಮ್ಮನಾ ।
ನೆರೆವಂ ಕೋಗಿಲೆ ನಿನ್ನ ಕಾಲ್ವಿಡಿದಪೆಂ ತೆಂಗಾಳಿ ತೊೞ್ತಾದಪೆಂ ॥೪೯॥

ವ॥ ಮತ್ತಮೊಂದೆಡೆಯೊಳ್

ಮಗಮಗಿಸಿತ್ತು ಕತ್ತುರಿಯ ಕಿತ್ತಲಗೆಂತದು ಪಲ್ಲ ಮಿಂಚು ಮೆ ।
ಲ್ಲಿಗೆಯ ತುಱುಂಬು ಮೆಯ್ಯ ಪಸುರೊಪ್ಪಿದುದಾತನ ವಾರಿಯಿಂದು ಮೈ ॥
ಮೆಗೆ ಬರುತಿರ್ದಪಂ [1]ಸಿತಗನೆಂಬುದು ಮುನ್ನ[1] ಬೊಜಂಗನೆರ್ದು ಮೆ ।
ಲ್ಲಗೆ ಪೊಱಮಟ್ಟು ಪೋಗೆ ನಗುತಪ್ಪಿದಳಾಗಳ್ ಧೂರ್ತೆ ಧೂರ್ತನಂ॥೫೦॥

ವ॥ ಮತ್ತಮೊಂದೆಡೆಯೊಳ್

ಪೊಸವನಿದಾವನಾದಪುದು ಕಂಡಱಿವಂತೆವೊಲೆಲ್ಲಿ ಕಂಡೆವೀ ।
ರಸಿಕನನಂದು ಕಂಡ ತೆಱನಲ್ಲಿದು ತಾಂ ಬಱಿದಿಂ[2]ದು[2] ಬಂದನೀ ॥
ಬಿಸಿಲೊಳಿದೇಕೆ ಮೆಯ್ಯರಿಸಿನಂ ಪಿರಿದಕ್ಕಟ! ತಳ್ತು ಬಾಸುಳುಂ ।
ಪಸಿಯುವು ನೊಂದನೆಂದು ನುಡಿವಳ್ ತಡೆದೊಯ್ಯನೆ ಬಂದ ನಲ್ಲನಂ ॥೫೧॥

ವ॥ ಮತ್ತಮೊರ್ವಳ್

ಮೊಡದೆ ಮಂದನಿಶ್ವಸಿತದಿಂ ತೆರೆಯುಂ ತಿಳಿದಿರ್ದ ಕಳ್ಳನೆ ।
ಳ್ಕೊಡದೆ ಪೂವನಲ್ಲಿ ಪಱಿದಿಕ್ಕದೆ ಪೀಱದೆ ಕಳ್ತ ಬಟ್ಟಲೊಳ್ ॥
ನೋಡುತುಮಿರ್ದಳೊರ್ಬಳೊಲವಿಂದರನೇಱಿಲ ಪಣ್ಣ ಬಣ್ಣಮಂ ।
ಜೋಡಿಸೆ ಕಾದಲಂ ಪಿಡಿಯೆ ಪೊಂಗಿ ಪೊದಱ್ದಧರೋಷ್ಠಮಧ್ಯಮಂ॥೫೨॥

ವ॥ ಮತ್ತಮೊರ್ವಳ್ ಕನ್ನಡಿಯಂ ನೋಡುವಾಗಳಱಿಯಲೀಯದೆ ಪೆಱಗನೆ ಬಂದು ನಲ್ಲಂ ನಿಂದಿರಲೊಡನೆ,

ಕಡೆಗಣ್ಮಾಣದೆ ನೋಡಲಟ್ಟುವಡುಗುಂ ಚಿತ್ತೇಶನಂ ನೋಡಲುಂ ।
ಕುಡದೆನ್ನಂ ಕಡುಲಜ್ಜೆಯೆಂದು ಮಱುಗುತ್ತಿರ್ಪಾಕೆ ತಾಂ ಕಂಡು ಕ ॥

ಪಾ— 1. ಸಿತೆಗೆಯೆಂಬುದುಮಪ್ಪೆ. ಖ॥ 2. ತು. ಗ॥

ಸ್ನಡಿಯೊಳ್ [1]ನಾಡೆ[1] ನಿಜೇಕ್ಷೆಯಿಂ ಮುಖರಸಪ್ರಸ್ಯಂದಮಂ ತೃಷ್ಣೆಯಿಂ।
ಕುಡಿವಂತೇನತಿಮುಗ್ಧೆ ಚುಂಬಿಸಿದಳೋ ಪ್ರಾಣೇಶವಕ್ತ್ರೇಂದುವಂ ॥೫೩॥

ವ॥ ಮತ್ತಮೊರ್ವಳಾಕೆಯ ನೆರೆಮನೆಯೊಳಿರಲ್ತಕ್ಕಾಕೆ ಬಂದ ಬಳೆಗಾಱಂಗೆ ತಂಬುಲಮಂ ಕೊಟ್ಟಿಂತೆಂದಳ್.—

ತುಡಿಸುವುದೇಕೆ ನಿಲ್ಲ ಪಲವುಂ ಬಳೆಯುಂ ಬಳೆಗಾಱ ನಿನ್ನ ಕಾ ।
ಲ್ವಿಡಿದಪೆನಿತ್ತಪೆಂ ನಿನಗೆ ಬೇಡಿತನೆನ್ನಿನಿಯಂ ಕನಲ್ದು ಪೋ ॥
ದೊಡೆ ಬಳೆ ಕೈಗಳಿಂದಿೞಿದು ಬೀೞ್ವುವು ಬರ್ಪುದುಮಾಗಳಂತೆ ಕೇ ।
ಳೊಡೆವುವು ನನ್ನಿ ನಿನ್ನ ಬಳೆಯುಂ ಬಳೆದೊಟ್ಟರನಣ್ಣ ಕಾಣಿರೇ ॥೫೪॥

ವ॥ ಮತ್ತಮೊರ್ವಳತಿಧೂರ್ತೆ,

ಪುರುಡಿಂ ಕೊಂಡನರಾರೊ ನಿನ್ನಣಲ ಪಲ್ಲಂ ಪೆಂಡಿರಾರ್ ಮುಂಥೆಯೊಳ್ ।
ಸರೆಯಂ ಪೊಯ್ದವಳಾವಳಟ್ಟೊಱಸಿದಳ್ ಕೂರ್ತಾಸ್ಯದಿಂ ಮೋಱೆಯೊಳ್ ॥
ತೆರೆಯಪ್ಪಂತಿವೊಲೆಮ್ಮ ಕಮ್ಮಮಿನಿತುಂ [2]ನಿಮ್ಮತ್ತೆ[2] ಮತ್ತೊರ್ವಳೊ ।
ಳ್ಬರಮಂ ಮಾಡುವುದೆಂದದೇಂ ಮುದುಪನಂ ವಕ್ರೋಕ್ತಿಯಿಂ ಮಾಣ್ದಳೋ

ವ॥ ಮತ್ತಮೊರ್ವಳ್ ನಗೆನಗೆಯೊಳ್ನೀನೀಗಳನಿತು ಬೇಟಮಂ ತಳೆದೆಯೆಂದು ಕಾದಲಂಗಿಂತೆಂದಳ್:—

ಅಗಿದೆನಗಿಂತು ಸಂಜೆಯುನೆ ಸಾಧಿಸಿ ಸೂ[3]ರುಳ್[3]ದಾಗಳೇಂ ಗಳೂ ।
ಱುಗವೆಲೆ ಕಂಡ "[4]ಪೊಟ್ಟು[4]" ಗುಣದಿಂ ನಿನಗೊಲ್ದುದು ಮಾತೆ ಕಾಮನಾ ॥
ಣೆ ಗಡೆಳಮಾವಿನಾಣೆ ಗಡ ಮಲ್ಲಿಗೆಯಾಣೆ ಗಡಿಂದುಬಿಂಬದಾ ।
ಣೆ ಗಡ ಬಸಂತನಾಣೆ ಗಡ ಬಲ್ಲೊಡಮಾನಱಿಗಂಡರೆಂಬುದಂ ॥೫೬॥

ವ॥ ಅದಲ್ಲದೆಯುಂ,

ಸೂಳೆಯು*ರ್ಗಳ್ಪುದೇನೆಲವೊ ಕೂರದೊಡಂ ಕಡುಗೂರ್ತರಂಗದಿಂ ।
ಮೋಳಿಸಿ ಗಂಡರಿಂ ಪಡೆವುದರ್ಥಮನಲ್ಲದೊಡೆಮ್ಮ ಪೆರ್ಮೆಗಂ ॥

---

ಪಾ— 1. ನೋಡೆ. ಕ॥ 2. ನಿಮ್ಮಂತೆ. ಗ॥ 3. ರೊಳ. ಖ॥; ರುಳ. ಕ॥
4. ಪತ್ತು. ಗ ಖ॥

ಪೊಳಗನೊಲ್ದು ಕೊಟ್ಟಪರೆ ಗೂರ್ತೂಡವೋಂ ಬೆಲೆವೆಣ್ಗೆ ಬೇಟವೋಂ ।
ಹಾಳಿದಮುಕ್ಕುಮೋ ಕಱಿವೆಯೋಗರಮುಕ್ಕುಮೊ ತುಪ್ಪಮುಕ್ಕುಮೋ ॥೫೭॥

ವ॥ ಮತ್ತಮೊರ್ವಳ್ ಕಡುಗೂರ್ತುದಂ ಕಂಡು ಕಾಡುವ ಮಾಯದ ಭುಜಂಗಂಗಿಂತೆಂದಳ್:—

ಇದೆ ಕಡಿವಿತ್ತ [1]ಕಾಳ್ಪುರಲ ಕಪ್ಪಡಮುಂ[1] ಬಿಡಮೀಗಳಿಂತೆ ತೀ ।
ವಿದಿಯಿಱಿಬೇಱಿನೊಳ್ ಬಸಿವನೆತ್ತರುಮುನ್ನುರದೊಳ್ ಕಲೆಗೆಟ್ಟೆಯಿನ್ನುಮಿ॥
ಕ್ಕಿದ ಪೆಸರಕ್ಕರಂ ಮುಳಿಸುಮೇಟ್ಪುದೆ ಬೇಟ್ಪೊಡೆ ಬೇಡದಿನನೀ ।
ವುದೊ ಪೊಸಲಂಚಮುಂ ಹರಣಮುಂ ಪಿಡಿಯಿಂ ಪೆಱತೇನನಿತ್ತಪೆಂ ॥೫೮॥

ವ॥ ಮತ್ತಮೊಂದೆಡೆಯೊಳ್,

ಜಱಿಗೊಂ[2]ಡಳ್ಕ[2]ರ್ದೆಯಿನ್ನುಮಾಱದಲರ್ಗಣ್ಣಿಂಗತ್ತ ಕೆಂಪಿನ್ನುಮೋ ।
ಸಱದೆತ್ತಂ ಬಿಸುಸುಯ್ಯ ಬೆಂಕೆಯುಲಿಪಿಂ [3]ಪಳ್ವದ[3] ಬೆಳ್ಪಾಯು [4]ದ ॥
ದುಱಿವೋಂ[4] ಮಾಣ್ದುದೆ ತಾಂ ಗಡಕ್ಕಟಱಿವಂ ಮತ್ತಿಂತು ಸಂತಾಪದಿಂ ।
[5]ಸಱಿಪೋಪಂ ಪ್ರಿಯ ನಿನ್ನ ರೂಪನೆಡೆಯೊಳ್ ಪೇೞ್ದೊಡಲಿನ್ನೇವೆನೋ[5] ॥

ವ॥ ಎಂದಲಗಣಸಂ ತೋಱಿ ನಿಲ್ಲಿಸಿದಳ್. ಮತ್ತೊಂದೆಡೆಯೊಳೊರ್ವಳ್ ಸಱಿಯುಂ ತಳ್ಕೈಸಿಪಂತಪ್ಪ ಕಲಿಗೊಂಟಣಿ,

ಅಱಿದ ಕುರುಳ್ಗಳೀನುರುಳಿಗೊಂಡುವೆ ಬಂದೆರ[6]ಡಾದ[6]ಸುಯ್ಗಳೊಳ್ ।
ಕಱಿದಸುವೀಗಳೇಂ ಮಗುೞೆ ಬರ್ಪುದೆ ಬೆಂದಲರ್ವಿಲ್ಲನಿನ್ನುಮೋ ॥
ನಿಱಿಪಿದನೇ ಕರಂ ಕೊಱೆಯ ಮೇಲೆ ಕವರ್ತೆಯೆ ಎನ್ನ ಕೂಸನಿ ।
ನ್ನುಱಿದೊಡೆ ನಿನ್ನ ಕಯ್ಯೊಳಱಿವೆಂ ಗಡ! ನೋಡಿಮಿದೊಂದು ಗೊಡ್ಡಮಂ

ವ॥ ಎಂದು ಪರಿಯೊಳ್ ಪಾತಾಳಮಂ ತೋಱಿದಳ್. ಒಂದೆಡೆಯೊಳೊರ್ವಳೊಲ್ಲದೆ ಕಾಡುವ ನಲ್ಲನನಿಂತೆಂದಳ್:—

---

ಪಾ— 1. ತಾ ಬೆರಲ ಕಪ್ಪಡಮುಂ. ಗ॥; ಕಾಳ್ಬೆರಲ ತಕ್ಕಡಮುಂ. ಖ॥ 2. ಡೆನ್ನೆ. ಗ॥ 3. ಪೆಳಿದಿರ್ದ. ಗ॥ 4. ಮೊರ್ಮುಱಿನೇಂ. ಗ॥ 5. ಸಱಿಪೋಪಂಪ್ರಿಯೆಗಾದರೂಪನಿನಿಯುಂ ಪೇೞ್ಕಿಂಡೊಡಿನ್ನೇವನೇ. ಖ॥ 6. ಡೊಂದಿ. ಗ॥

ಮನೆಗೆಲ್ಲಂ ಪಗೆಯಾದೆನತ್ತೆಗೆ ಕರಂ ಗೆಂಟಾದೆನಿಂ ಮೆಚ್ಚದಂ ।
ಗನೆಯಗೊರ್ಳ್ಕುದಳಾದೆನೋಪ ಗುಱಿಯಾವೆಂ ಪಂಚಬಾಣಕ್ಕೆ ಪ ॥
ದ್ಮಿನಿಯಾದೆಂ ವಿಧುವಿಂಗೆ ನಿನ್ನ ಕತದಿಂ ಕೇಳಱ್ತೆಕಾಱಂಗೆ ಕೊ ।
ರ್ತೆನಗಿಲ್ಲಿಂ ಪಿರಿವಕ್ಕನೊಂದು ಸುರಿದಳ್ 'ಭೋರೆಂದು'[1] ಬಾಷ್ಪಾಂಬುವಂ ॥

ವ ॥ ಎನೆ ಮತ್ತೊಂದೆಸೆಯೊಳ್,

ಸುಡುವುಣ್ಣಾದಸ್ರದಿಂದು ನಿನ್ನಧರಮುಪ್ಪಿಂಗೆಯ್ದದಂತಾಗಿ ಪೊಯ್ ।
ಬಡವಾಯ್ತಕ್ಕಟಿದಾರೊಳಾಯ್ತು ವಿರಹಂ ಪೇ[2]ೞ್ಕಿಂಪೆ[2]ನಿಲ್ಲೀಗಳಃ ॥
ಕುರ್ಗಿಡಿವಂತೆಂಪನನಪ್ಪಿ ಪಾಯ್ದುನಿಯನಂ ಬಾಷ್ಪಾಂಬುವಿಂ ನಾಂದು ತಾಂ ।
ಪಿಡಿದಳ್ ಪೀಡಿಸಿದಳ್ ಪ್ರೋದಱ್ದಧರಮಂ ತಾನುತ್ತರಂಗೊಟ್ಟಪಳ್ ॥೬೦॥

ವ॥ ಮತ್ತಮೊರ್ವಳ್ ಕಾದಲಂ ಕನಲಿಸಿ ಕಾಲ್ವಿಡಿಯೆ ಕೆಳದಿಗಿಂತೆಂದಳ್—

ಕರಹಂ ಪೆಂಡಿರದೈದೆ ತನ್ನ ಗುಱಿವಿಂ [3]ಕಟ್ಟಾಯದೊಳ್ ನಿಂದನೇ ।
ಕೆ[3]ರುಣಂ ತನ್ನದು ಕೂರ್ಮೆ ಪೆಂಡಿರದು ಬಿಂಕಂ ತನ್ನದಾಪಂಕೆ ಪೆಂ ॥
ಡಿರದಿಂಪಿಂ ನೆರೆವಿಚ್ಚೆ ಪೆಂಡಿರದು ಕೋಟಂ ತನ್ನ ಪಂತಲ್ತು ಪೆಂ ।
ಡಿರದೆಂ[4]ದುಂ[4] ಮುಳಿಸೇಂಪ್ರಸಾದಕರುಣಾ ಕೇಳ್ತನ್ನದೆಂಬಂ ಸಖೀ ॥೬೧॥

ವ ॥ ಮತ್ತಮೊರ್ವಳ್ ಸೂಳೆಗೊಟ್ಟಿಯೊಳ್ ಬೊಜಂಗನಾತಾಗಿ ತನ್ನ ಕೆಳದಿಗಿಂತೆಂದಳ್ :—

ಎಳಮೆಯೊಳಲ್ಲಿ ಕಲ್ತಳದನೀಯದೊಡಂ [5]ನೆರೆ[5]ದೀಯನೆಂದು ಬ ।
ಲ್ಲಳೆ ಮಿಗೆ ಲೋಭಗೊಂಟಣಿಯುಮೊಲ್ಲ[6]ದುಪಂ[6] ವಿಟನೊಲ್ಲನೆಂದು ಬ ॥
ಲ್ಲಳೆಯೆಳವೇಟದಾಕೆಯುಮಿವಚ್ಚರಿಯೊಲ್ವೊಡಮೊಲ್ವನೆಂದು ಬ ।
ಲ್ಲಳೆ ಕಡು '[7]ದೇಸೆ[7]'ಯುಂ ಚದುರಿದಿಂಪಿದು ಪೆಂಪದು ಕೀರ್ತಿಕಾಂತನಾ ॥

ವ॥ ಅವನಾವನೆಂದಱಿಯದಿಂತೆಂದ ಕೆಳದಿಗೆ ಮತ್ತಮಿಂತೆಂದಳ್ :—

---

ಪಾ— 1. ಬೆಂಬಿರ್ದು. ಕ॥ಗ॥ 2. ಱ್ಕಿನ್ನೆ. ಗ॥ 3. ಕಟ್ಟಾಯದಿಂ ನಿಂದಿನಿ. ಷ್ಟ|ಗ॥ 4. ತುಂ. ಗ॥ 5. ಮುಱಿ. ಗ॥ 6. ದೊಡಂ. ಗ॥ 7. ಸೇದೆ. ಗ॥

ಪಿರಿದೀವಂ ಕಲಿ ಕೂರೆ ಕೂರ್ಪನುಱುವಂ ನೀಱಂ ಕರಂ ಭಾವಕಂ ।
ಬೆರಸ[1]ಲ್ಲಕ್ಕ[1]ನುದಾತ್ತನಿತ್ತು [2]ನೆರೆವಂ[2] ನಿಗರ್ವಿಲಂ ಭೋಗಿ ನಾ ॥
ಲ್ಕಿರಸಂ ಗೀತದ ಗೊಟ್ಟಿಗೊಲ್ವನಿನಿಯಂ ತೋಳ್ಗೊಪ್ಪುವಂ ಸೂಳೆಗೈ ।
ಸಿರಿಯಂತೊಪ್ಪುವನಾವನೀಗಳಱಿದೆಂ ಶೃಂಗಾರಕಾರಾಗೃಹಂ ॥ ॥೬೫॥

ವ॥ ಆಪ್ರಪಂಚಮನಾಲಿಸಿ ವಿದೂಷಕನೆನ್ನವನೊರ್ಬಳಿಂತೆಂಬಳಿಲ್ಲ ಕ್ಕುಂ; ಇವರ್ಗಂದ ಬಂಟನಾದಪೆನೆಂದಂ. ಮತ್ತೊರ್ಬಳ್ಬೀಂಟದ ಮಾತನಾಡಿ ನಗಿಸುತ್ತಂ,

ಬಿರುದರ ಬಿಂಕಮಂ ಪೊಗೞ್ವ ಕೂಂಟಣಿ ತೋಳ್ಗಳಸಿರ್ಪ ಸೂಳೆವಂ ।
ಟಿರ ಸೊಬಗಿಂಗೆ ಮೈಮಱೆದು ಮೆಚ್ಚುವ ಬಿಂಕದ [3]ಬರ್ದೆಗೆಯ್ತದೊ[3]ಳ್ ॥
ಬೆರಸಿದೊಡಂಬೆ ಬರ್ದೆನೆನುತಿರ್ಪ ಭುಜಂಗನೆ ತೋಳೊಳಿರ್ಕೆ ಸಾ ।
ಸಿರ ವರಿಸಂಬರಂ ಸುಡುವೆನಾಂ ಗಡ! ಮತ್ತಿನ ಪಾಱುಗಂಡರಂ ॥ ॥೬೬॥

ವ॥ ಮತ್ತವೊರ್ವಳ್

ಕುಡುವ ಗುಣಕ್ಕೆ ತಾನೊಡೆಯನೊಲ್ಮೆಗೆ ತಾನೊ ಯಂ ಚಲಕ್ಕೆ ತ ।
ನ್ನೊಡನೆರೆವಲ್ಲಿ ತಾನೊಡೆಯನೞ್ತಿಗೆ ತಾನೊಡೆಯಂ ದಲೆಂಬ ನಾ ॥
ಣೊಡೆಯನನಪ್ಪಿಯುಂ ಮಗುೞ್ಚೆ 'ತಾನೞಿ'ಗಂಡರನಪ್ಪುತಿರ್ಪ ಪೆ ।
ಣ್ಗಡಣದ ಮುನ್ನಿನುಳ್ಳ ಶಿಶುಭಾಗ್ಯಮುಮೀನರೆಯಾಗಿ ಪೋಗದೇ ॥೬೭॥

ವ॥ ಮತ್ತವೊರ್ವಳ್ ನೀನಿವನನೊಲ್ಲದಿರ್ದೊಡಂ ಕುಡುವೊಡವೆಗಂ ಕರೆ ಯಲೆವೇೞ್ಕುಮೆಂದ ಕೆಳದಿಗಿಂತೆಂದಳ್:—

ಬಸನಿಗನಾದೊಡೊಂದು ಗುಣಮಾದೊಡವಕ್ಕನೆ ಬೇಡ ಕರ್ಕಶಂ ।
ಕಿಸುಗುಳಿಗಂ ವಿಕಾರಿ ಜಡ ನಾಣಿಲಿ ಜುಬ್ಬುರಿ ಬೂತು ಕಾತರಂ ॥
ಪುಸಿವನೊಡಂಬಡಂ ಸುಸಿಲನಿಂ ಪಗೆಯಾವನೊ 'ಪೆೞ್ಗೆ' ಗಂಡರೇಂ ।
ಬಿಸುವುಡುದಾತನಂ ನುಡಿಯುವೇಡವನೇವನೊ ಲಕ್ಕಮೀವೊಡಂ ॥ ॥೬೮॥

ವ॥ ಅದಲ್ಲದೆಯುಂ,

---

ಪಾ— 1. ಲ್ಬಲ್ಲ. ಕ॥ 2. ಮೆಱೆವಂ. ಗ॥ಖ॥ 3. ಬರ್ದುಗ್ಗೆಯನೊ. ಖ॥
4. ನಿಲ್ಲಜ. ಕ॥ಗ॥ 5. ಪೇೞ್ಗೆ. ಗ॥

ಅವನೊಡನೊಂದಿರುಳ್ಕಿರ[1]ನಳಾದೊ[1]ಡೆ ಸೂಳೆಗೆ ಸಾವು ಬೇೞ್ಪೆ?।
ೞ್ಕುವೆ ಮನಮಾಗದೊಂದಿವಸಮೊಟ್ಟಿಲುಂ ಕರೆಯಲ್ಕೆ ಕಣ್ಗಳಾ ॥
ಗವು ಮುಚಿದಪ್ಪೊಡಂ ತೆರೆಯಲ್ಕೈದಿವಸಂ ಹಡಹಿಂಗೆ ಮೆಯ್ಗಳಾ।
ಗವು ಬೞಿಕೆಂದುಮಾಪ್ರೋಲೆಯುನೀವುದನಿಕ್ಕುಗೆ ಕಾವಗಾಡಿನೊಳ್ ॥೬೯॥

ವ॥ ಮತ್ತಮೊಂದೆಡೆಯೊಳ್

[2]ಬಿಡಿದೊಡೆ ಪೋಂಗಿ ಪಂದೊವಲಪ್ಪೆಲ್ಲಿಯೇಱುವ ಸೊಕ್ಕಿದಾನೆವೋಲ್।
ಪಿಡಿದುಗಿಗೊಂಡೊಡಗ್ಗಳಿಪ ಬಗ್ಗಿಸಿ ಪೊಯ್ದೊಡೆ ಬೂತಿನಂತೆ ಪಾ ॥
ಯ್ವೊಡನೆ ರಸ್ಥಿಲುಂಮೆನಲ್ಸೆಡೆಯು ಚಾಳಿಪ ಜಾಯಿಲನಂತೆ ಮೊಕ್ಕಳಂ ।
ಬಡುವ ಬದಂಗಿ ದುರ್ಜನನಿಯಲ್ಲದಳಾತನನೊಕ್ಕಿ ಸುಟ್ಟಪಳ್ ॥೭೦॥

ವ॥ ಮತ್ತಮೊಂದು ಕೊಂಟಣಿಗೊಟ್ಟಿಯೊಳ್ ಸೂಳೆವಾತಿನೊಳೊರ್ವ ಳಿಂತೆಂದಳ್:—

ಜಗಳಂ ದೇವನೆ ವಾರಿಗೀಕೆ ನಡೆವಾಗಳ್ತೋಟಿ ಮಾಱಾಳಿಯೊ ।
ತ್ತಿಗೆ ನಿಂದಲ್ಲಿ ವಿಲಾಸಮುಜ್ಜಳಿಸೆ ಭೋಗಕ್ಕೆಂದು ಪೋಪಲ್ಲಿ ಕಾ ॥
ಳೆಗವೆಂದುಂ ಬೊಜಗರ್ಗೆ ಪೋಗೆಳಿಪಳ್ಗಳ್ ವಾರಿಗಂ ನಿಲ್ಲಳೊ ।
ತ್ತಿಗೆ ಭೋಗಕ್ಕಗಿದೆನ್ನ ತಂಗಿ ನಡೆಯಳ್ ಸೌಭಾಗ್ಯಮಿಂತಕ್ಕುಮೋ ॥೭೧॥

ವ॥ ಮತ್ತಮೊರ್ವಳ್ ತನ್ನ ತಂಗಿಯ ಸೌಭಾಗ್ಯಮಂ ಪೊಗೞ್ದಳಿಂತೆನೆ—

ಎತ್ತಿದ ಬದರ್ ಮೋಣ್ [3]ಬದಗೊ[3]ಪೇೞಿಮಿದೀಕೆಯ ಕೂರ್ಪುರ್ಮೆಲ್ಪೊ ಬಿ
ಕ್ಕೊತ್ತಿಗೆ ಕೊಟ್ಟವಂ ಕುಡುವನಾಗಳೆ ಪತ್ಕೆಗೆ ಪತ್ಕೆಗರ್ಥಮಂ ॥
ತೆತ್ತನೆ ನಣ್ಪಿನೊಳ್ ನಡೆವನಾಕಡುನಣ್ಪಿನ ಗಂಡನೋಹಿಯೊಳ್ ।
ಪತ್ತುವನೋಹಿಗಿತ್ತವನೆ ಸಜ್ಜನಕಿತ್ತವನೆಂದು [4]‘ಸುತ್ತುವಂ’ ॥೭೨॥

ವ॥ ಮತ್ತಮೊರ್ವಳ್

ನೋಡುವೊಡಿಲ್ಲ ಕಣ್ಣಲಸಿ ನಿಪ್ಪೊಸತಂ ಮನವಂ ಗುಣಕ್ಕೆ ಬಂ ।
ದಾಡುವುದಿಲ್ಲ ಗಾಡಿ ಸೆಱಗೇವುದು ಕಂಡೊಡೆ ಕೊಟ್ಟು ಪತ್ತುವರ್ ॥

ಪಾ—1. ದು ಕೇಳ್ದೊ. ಗ॥ 2. ಜ. ಗ॥ 3. ಬೆಜಗೊ. ಕ॥ 4. ಕಾಡುವಂ. ಗ॥

ಬೇಡುವರಿರ್ದರಿತ್ತಗಲರಿತ್ತುೞಿವಕ್ಕೆ [1]ಬೞಿಕ್ಕೆ[1]ಸಾರ್ವರೀ |
ನೀಡುವರೊತ್ತೆಯುಂ ಮನೆಯ ಬಾಗಿಲೊಳಗ್ಗಳಮಾಸೆಮಾಡುವರ್ ॥೨೩॥

ವ॥ ಮತ್ತೊರ್ವಳ್

ಬಿಯಮಂ ಬೇಡಿತನೀವೆನಗ್ಗದ ಬೊಜಂಗೆಕೂರ್ತುನ ಕಣ್ಗಾಣದೊ ॥
ತ್ತೆಯ ಮೊಲೊತ್ತೆ ಬರುತ್ತುಮಿರ್ಪುದುೞಿವಪ್ರೌರ್ಕ್ಯಾ[2]ವಗಂ[2] ಕೊಟ್ಟು
ಕೋ|ಟೆಯುಮಂ ಕಾದೊಡನಿರ್ಪರಿಲ್ಲ ಪಡಪಿಂದೀಕೇರಿಯುಂ ಬಿಟ್ಟು ಸೂ|
ಳೆಯರೆಲ್ಲಂ ನೆರೆಪಳ್ಳಿಪ್ರೊದ[3]ರಿ[3]ವಳೀಮಾಧುರ್ಯಮಿನ್ನೆಂತುಟೋ ॥೨೪॥

ವ॥ ಮತ್ತಮೊರ್ವಳ್

ಬೆರಕೆಗೆ ಪೇಸುವಳ್ ಬೊಜಗರಪ್ಪರ ನಂಟರೊಳಂಗಹೀನರುಂ |
ತರುನಲಿಗಂಡರುಂ ಮನೆಗೆ ಬಂದೊಡೆ ನಾಣ್ಚುವಳ್ಳೈದೆ ಬೇಟವೊಳ್ ॥
ಕರವೊಳಗಾಗೆ ಕೊರಿಸಿದನಂಗೆರವಂ ನತೆ ನೆಱಡಳೊರ್ಕ್ರಿಯುಂ |
ನೆರೆವನೆಯೆಂತುಟೆಂದಱಿಯಳೀಕೆಯಡೇಂ [4]ಕರ[4]ವಾಯಕಾರ್ತಿಯೋ ॥೨೫॥

ವ॥ ಎಂದು ತನ್ನ ತಂಗಿಯುಂ ಪೊಗೞ್ದಳ್. ಮತ್ತೊರ್ವಳ್

ಅವಧರಿಸ[5]ದೇನನಿತ್ತೊಡ |
ಮವಚತ್ತಪ್ರೊಲಿರ್ಪ[6]ಳೋಪನೊಳ್ ನೆರೆವ್ರೊಡೆ ನೋ ॥
ವವಗಳಿಯುಮೀಕೆಗಲಸಿಕೆ |
ಯಿವಳಿಂದಂ ಬಿಟ್ಟು [7]ಬೇ[7]ಯಕಾರ್ತಿಯರೊಳರೇ ॥ ॥೨೬॥

ಪಿರಿದುಂ ನುಡಿಯಳ್ ಬಗೆಯಳ್ |
ಸಿರಿನಂತನನೊಲಿಸಿದವನುಮಂ ಕೈಕೊಳ್ಳಳ್ ॥
ಕರಮೊಂದುಂ ಮಾಡಳ್ ಸಿಂ |
ಗರಮುಂ ರೂಪಿಂಗೆ ಕೊರ್ಪರೆಲ್ಲರುಮಿವಳಾ ॥ ॥೨೭॥

ತೊಡೆಯುತ್ತಲ್ಲದೆ ಗಂಧಮಂ ಪಡೆವರಾರ್ ಮೈ'ಗೊಟೆ'ಮಂ ಲಂಚಮಂ|
ನುಡಿದುಂ ನೀಂ ದಯೆಗೆಯ್ವುದೆಂದವಳ ಕಾಲೊಳ್ ಬಂದು ಬಿೞ್ದಲ್ಲದಾ ॥

---

ಪಾ— 1. ವಳಕ್ಕೆ ಗ॥ 2. ತನಂ ಗ॥ 3 ಳಿ. ಗ॥ 4 ಕಡು. ಖ॥
5 ದೆನಿನಪಿತ್ತೊಡ|ವ.ವನೀಕ್ಷಿಸದಿರ್ಪ. ಖ ॥6 ವಾ. ಗ॥ 7 ಸೋಂಕು ಖ॥

ಪೆಱೆ ಬಾಯ್ಗೂಟಮದೆಂಟುತಿಂಗ[1]ಳೂಡಮಾಳಂಬಟ್ಟ್ರೊ[1]ಡಂ ಕಾಲ್ಗಳಂ ।
ಪಿಡಿಕ್ಕೈಸುತ್ತಮೆ ಸೋಂಕಿದಲ್ಲಮುೞಿವಂತಾರ್ಕಂಡರಿಂಗೂಟಮಂ ॥೮೪॥

ವ॥ ಎಂದು ತನ್ನ ತಂಗೆಯ ಕೆಯ್ತ್ತಮನೆತ್ತಿ ನುಡಿದಳ್ ಮತ್ತೊರ್ವಳ್

ತನು ತವುಪನ್ನವೋಱತಗಲದಿರ್ಕೆವಸೆನ್ನೊಳೆ ನೋಡದಿರ್ಕೆವಂ ।
ಕನಸಿನೊಳಪ್ಪೊಡಂ ಪೆಱರನಿಂ ಮುಱಿಮೆಯ್ಯೊಳಮಕ್ಕೆ ಗಂಡನೀ ॥
ತನೆ ತನಗೆಂದು ಮಲ್ಲಿಗೆಯ ಮಾವಿನ ರೋಹಿಣಿಯೇಱ್ಗಮೆತ್ತ ಱಂ ।
ದ್ರನ ನೆರೆದೊಪ್ಪವಾರತಿಯ ಕಾಮನ ನೋಂಪಿಗಳೇಕೆ ಗಾಗಳುಂ[2] ॥೮೫॥

ವ॥ ಎಂದು ತನ್ನ ತಂಗೆಯನಾಕೆಯ ನಲ್ಲನುಮಂ ತೋಱಿ ನುಡಿದಳ್ ಮತ್ತೊರ್ವಳ್,

ನಲ್ಲಂಗೆ ಬಯಕೆ ಸುರತಂ ।
ಪಲ್ಲಟಿಸದು ತನ್ನ ಬೇಟಮುಱಿದಮರಂ ಕ ॥
ಣ್ಬೊಲ್ಲದೊಳೆ ಗೆಲ್ವಳನ್ನಿವ ।
ಳಲ್ಲದೆ ಜಗದೊಳಗೆ ಚೆಲ್ಲಗಾರ್ತಿಯರೊಳರೇ ॥ ॥೮೬॥

ವ ॥ ಮತ್ತಮೊರ್ವಳ್,

ಧನಮುಳ್ಳನುಮಿಲ್ಲದನುಂ ।
ಮನದಾಣ್ಮನುಮೊತ್ತೆಯಾಣ್ಮನುಂ ನೆರೆವೆಡೆಯೊಳ್ ॥
ತನಗೆ ಸರಿಯೆನಿಪ ಬರ್ದಿನ ।
ವನಿತೆಗೆ ಸಲೆ ಸಂದುದುಱಿವರೊಳ್ ಸಂದಪ್ರದೇ ॥ ॥೮೭॥

ವ ॥ ಮತ್ತಮೊರ್ವಳ್ ತನ್ನ ಮಗಳ ಮೊಗದೊಳ್ ದಾಕ್ಷಿಣ್ಯಮಿಲ್ಲ ದಿಂತೆಂದಳ್

ಚೆಲ್ಲಕ್ಕಲಸುವಳಲಸಳ್ ।
ಗೆಲ್ಲಕ್ಕನೆ ನೋಡೆ ಕಣ್ಣ ಕಾಡಿಗೆಯಂ ಕೊಂ ॥
ಡಲ್ಲದೆ ನಿಲ್ಲಳ್ ನುಡಿದೊಡೆ ।
ಕಲ್ಲವಿಲಂ ಮಾಡಿ ಬಾಯ ಕೆಂಪಂ ಕೊಳ್ವಳ್ ॥ ॥೮೮॥

---

ಪಾ— 1 ಳರೆವಾಳಂ ಬಿಜ್ಜ್ವ. ಖ॥ 2 ಗಾದುದಂ. ಗ॥

ಪೊಸಗಂಪಾದೊಡಮುಕ್ಕುಮೆಂದೆ ಪೆಱರಿಂ ಕಿರ್ಗಾಳಿಯೊಳ್ [1]ನಿಲ್ವಳೇ[1] |
ಕ್ಷಿಸಿದೊಳ್ಪಿಂದೆಲೆಗೊಂಡೊಡಲ್ಲದಿವಳಾರ್ಗಂ ಸುಣ್ಣಮುಂ ತನ್ನ ಸಂ |
[2]ತಸದಿಕ್ಕಳ್ ಸವಿವಲ್ಲದ[2]ಸ್ವಪಘುಗೊಲ್ದೊಳ್ಗಂಡರಂ ಕಂಡು ಕಂ|
ದಿಸುವಳ್ಕೂಡಿಸಿ [3]ಗೆಲ್ಲಕಾರ್ತನ[3] ಮಿದೆ ನೀಪೆಣ್ಗೆ ಕಣ್ಗೂರ್ತುದೋ ||೮೯||

ವ|| ಮತ್ತಮೊರ್ವಳ್

ಏಱಿದ ಜವ್ವನಂ ನಸು ಬೞಲ್ದುದು ಬೇಟದ ಬೆಂಕೆಯಿಂದೆ ಬೆಂ |
ದಾಱಿದುದೈದೆ ಚಿತ್ತಮತಿಚಿತ್ರರತಂಗಳೊಳೞ್ಬಿಯಾಗಳುಂ |
ನೀಱರಸಿಂಗಳಾಯ್ದುಱಿಸುತಿರ್ದಪುದೀಕೆಯ ಕಣ್ಗಳೀಕೆ ಕಾ |
ಯ್ದಾಱಿದ ಪಾಲವೊಲ್ಪವಿಯನಿನ್ನುಪಭೋಗಿಸಲಾರ್ಗೆ [4]ಮಾಡಳೋ[4]||೯೦||

ವ|| ಎಂದು ತನ್ನ ಮಗಳ ಮೇಲಪ್ಪ ಪಡಹಿಂಗೆ ಮುಯ್ಯಾಂತಳ್. ಮ
ತ್ತೊರ್ವಳತಿ ಚತುರೆ ಯಿಂತೆಂದಳ್:—

ಮುಗುಳಂ ತೋರದುಱಂಬನಿಕ್ಕಿ ಬಱಿದಾತೆ ಸೂತ್ರರಿಯಿಂ ಗಡ್ಡಮಿಾ |
ಸೆಗಳಂ ಗಂಡುಡೆಯುಟ್ಟು ಮಿತ್ರಜನದೊಳ್ಮಾತಾಡುತುಂ ಕಾಡುತುಂ ||
ನಗುತುಂ ನೋಡುತುಮಾತನಂತಿರಲಗಂ ತೂಗುತ್ತೆ ತನ್ನಿರ್ಪ ಚಾ|
ಕಿಗೆಯುಂ ಪೊಕ್ಕೊಡೆ ಸಸ್ಪೃಹಂ ಸವತಿ ತಂದಳ್ಕಾಲ್ಗೆ ನೀರಂ ಸಖೀ ||೯೧||

ವ|| ಮತ್ತಮೊರ್ವಳತಿ[5]ಚತುರೆ[5] ತನ್ನ ಕೆಳದಿಯ ವೃತ್ತಾಂತಮನಿಂತೆಂದಳ್

ಸೀಯನೆ ಪೇೞ್ವ ಕಾದಲನ ಮಾತನೆ ಭಾವಿಸಿ ಕೇಳ್ವ ಭಾವಮೊ |
ಲ್ದೀಯೆ ನಿಜೇಶನಂ ಮನಮನೀಕ್ಷಿಸಿ ನಾಣ್ಬುವ ಪೇೞ್ವ ತಂಗೆಯುಂ ||
ಬಾಯೊಳೆ ಬಾಯನಿಟ್ಟು ನಱುಪಂಬುಲಮಿಕ್ಕುವ ಮುಗ್ಧೆಯೊಂದು ಮೊ |
ಟ್ಟಯತದಿಂದವಮಾನಱಿದಿನಾಕೆಯ ವಲ್ಲಭನಾತನೆಂಬುದಂ || ||೯೨||

ವ|| ಮತ್ತಮೊಂದು ವಿಟಗೋಷ್ಠಿಯೊಳೊರ್ವಂ ಸೂಳೆಗಾಱಬೊಜಗಂ

---

ಪಾ— 1 ನಿಲ್ಲಳೇ. ಖ|| 2 ತಸದಿಂ ಕಳ್ಸವಿಗ. ಗ|| 3 ಗೆಲ್ವಕೈತವಂ. ಖ||
4 ಮಾಣ್ಪಳೋ. ಖ|| 5 ಚಪಳೆ. ಖ|| ಗ||

ನಿಱಿಗೆಳನಿಕ್ಕಿ ದಾಂಟಿಸದೆ ದುಂಡಿಸುವಾಕೆಯನೊತ್ತಿಗೊಳ್ಳದಂ ।
ತೆಱೆಯದೆ ತೀವಿಗುಳ್ಳ ಬಳಿನೀರ್ಗಳನಗ್ಗದ ಪೆರ್ಗ್ಗಿ ಮೆಯ್ಯನೆ ॥
ಯ್ದಿಱಿಯದೆ ಪೊತ್ತು ಪೇಸಿ ಪೆಱರಪ್ಪದವೊಲ್ ಸ್ಮರಭೈರವಂಗೆ ಪೆ ।
ಣ್ಗುಱಿಗೆಳನಿಕ್ಕದೊಂದೆರಡನೇಂ ವಿಟವೃತ್ತಿಗೆ ಮುಯ್ಯನಾಂಪುದೇ ॥೯೩॥

ವ ॥ ಮತ್ತೊರ್ವನಗಡಿನ ಪೆಂಡಿರೊಳ್ ವ್ಯವಹಾರವಲ್ಲದೆ ಬೇಟಮಿಲ್ಲೆಂ
ಗ ನಿರ್ಗೇಡಿಪೊಪಗಂಗೆ ಸೊಬಗುಪೊಪಂಗನಿಂತೆಂದಂ:—

ಆವೆಡೆ ಬೇಟವಿಂದಿನವರ್ಗಂದಿನ ಮಾಳತಿಯಂತೆ ಮಿಕ್ಕ ರ ।
ತ್ನಾವಳಿಯಂತಿರೆನ್ನದಿರಿವಿಂದಿನ ಚಂದ್ರಿಕೆ ಕಂದು ನಾತುರ್ದದೋ ॥
ಗಾವರದಿಂಪವೇಂ [1]ಪಱಿ[1]ಸಿತೋ ರತಿ ಪುತ್ತುದೊ ಪೊಟ್ಟನಾದುದೋ ।
ಕಾಮನ ಕೈದು ತೆಂಬೆಲರ ತಿಂಡಮೊ ಪೂವಿನ ಕಾಪು ಕೆಟ್ಟುದೋ ॥೯೪॥

ವ ॥ ಮತ್ತಮೊರ್ವ ನವಕಾಱನಿಂತೆಂದಂ:—

ಪೊಣರೆ ದಿಟಕ್ಕೆ ಸೂಳೆವನೆಗಲ್ಲದೆ ತೆತ್ತು ಪೆಣಂ ದನಂಗಳಂ ।
ಗಣಿಯಿಸದಿತ್ತು ಸಾರಸುಖಮುಳ್ಳೊಡೆಯಂತದು ಮಾತೆ ಕೂರ್ತವಂ ॥
ಪಣಿಸಿಸಡುತ್ತ ಪತ್ತುವೊಡಮರ್ಥಿಗೆ ಕತ್ತಿಗೆ ಸೂಳೆ ದಾಡೆ ಕೂಂ ।
ಟಣಿಗಣೆಯಂತೆ ಮತ್ತೆ ಮನೆ ತೀನ ತನರ್ಮನೆಯೆತ್ತು ಪತ್ತುವರ್ ॥೯೫॥

ವ॥ ಮತ್ತಮೊರ್ವನತಿಪ್ರೌಢಂ

ಕಡೆಗಣ್ಣೊಂಟಣೆವಾತು ದೂದವಿ ಮನಂ ತಾಯ್ತೊಂಪೆ ಬಲ್ಗೆಯ್ತವೊ ।
ಳ್ಗೊಡವಂದಂ ಬಲೆ ತನ್ನ ಬರ್ಮ [2]ಬಳಮದೊರ್ಪ್ಪ[2]ಯಿಲಂಕೊರ್ಮೆಕ್ಕೆ ॥
ಯಡಕಂ ವಂಚನೆ ಮಿಕ್ಕಮಾನಸಿಕೆ ಮುಂಚು[3]ಮುಂಚಲಂ ತಾನೆ ತಾಂ ।
ಪಡೆವಳ್[3] ಪತ್ತದರಾರೊಪತ್ತು ವಿಟಹೃತ್ಸಂತಾಪೆಯುಂ ತೀವಿಯಂ ॥ ॥೯೬॥

ಪಣಗೊಳ್ವಳ್ ಚೆಲ್ಲದಿಂದಂ ಚಮರನ ಚಮರಂಸೇಸೆಗೊಳ್ವಳ್ ರತಂತೋ
ರಣವೆಂಬಂತೀಕೆ [4]ಸೋಲ್ತೊರ್ಬಸವಬಸನಿಯುಂ[4]ಕೂರ್ತನಂತೊಂಡಿನಿಂಕುಂ

---

ಪಾ— 1 ಬಳೆ. ಕ॥ 2 ಬಳೆವದೊಳ್ಪಾ. ಗ॥ 3 ಸಜ್ಜವಂ ತಾನೆ ಸಾಲಿಸುವಳ್. ಖ॥
4 ಗೆಲ್ದಬ ಸಡ ಬಸದಿಯುಂ. ಗ॥

ಟಣಿ ಮಾಳ್ಪಳ್ಕ್ಷಣದಿಂನಾಣೊಡೆಯನನೆಡೆಯೊಳ್ನಿರ್ಧನಂಮಾಱಿಪಂತೀ |
ಗಣಿಕಾಸಂದೋಹದೊಳ್ತೋಱಿಪೆಯೆ ಪುರುಷಗುಣಶ್ರೀಗಳಗ್ರಾ[1]ಹಿಯಲ್ತೇ[1] ||

ಗುಣದಿಂ [2]ಕೂರಿಸಿ[2] ಗಂಡರಂ ಕವರ್ದುಕೊಂಡುತ್ಕರ್ಷಮಂ ಬೀಟಲ |
ಕ್ಷಣಮಂ ಮುನ್ನಿನವೇಸುಮಿಲ್ಲ ತೊವಲೆಂಬಂತಾಗೆ ನೊಯ್ಯೊಳ್ಖು ||
ವ್ರಣಮಂ ಮಾಳ್ಪುದೆ ತೇಪೆಗುಳ್ದ ಬಿನದಂ ಮುಂಗಯ್ಗಳೊಳ್ಜ್ವಾಲತಾ |
ಕಿಣಮಂ ಮಾಡಿದಳೀಕೆಯಲ್ಲಳ್ ಸನಾಕೃಷ್ಟೇಕ್ಷುಕೋದಂಡನಾ ||೯೮||

ವ|| ಮತ್ತಮೊರ್ವಂ ಸ್ತ್ರೀಪುರುಷಜೀವಗುಣಗಣವಿಧುರಂ

ಗಂಡರ ಚಿತ್ತಮಂ ಪಡೆದೊಡಲ್ಲದೆ ಕೇಳ್ಪಡಪಿಲ್ಲ ಸೂಳೆಯೊಳ್ |
ಪೆಂಡಿರೊಳಲ್ಲದಿಲ್ಲ ಸುಖಮೆಲ್ಲಿಯುಮೇದೊರೆಯಂಗಮಿಕ್ಷುಕೋ ||
ದಂಡನನಿಕ್ಕಿ ಗೆಲ್ದು ಗತಿಯೆತ್ತಿಸಿಪುತ್ತಮವೀತರಾಗನುಂ |
ಕಂಡನೆ ಮುಕ್ತಿಯೊಳ್ನೆರೆಯುವನ್ನೆಗಮೇಂ ಗಡನಂತಸೌಖ್ಯಮಂ ||೯೯||

ವ|| ಎಂಬೆಲ್ಲರ್ಗಭಿಮತನಾದಂ. ಮತ್ತೊರ್ವಂ ನೀನೀಗಳಾಕೆಯ ಮನೆಯತ್ತಲೇಕೆ ಪೋದೆಯೆಂದತಿಪ್ರಿಯವಯಸ್ಯಂಗೆ

ಬದಿಮುಗಿಪಲ್ಲದೇಂ ಪಿಡಿವಳೇ ಸೆಱಗಂ ನೆಱೆ ನಾಣ ತಾಣಮಂ |
ಬೆದಕದೆ ಸೈತೆ ಸೋಂಕುವಳೆ ಬೂತುತನಂ [3]ಪೆಱಗಾಗೆ[3] ಮಾತುಗು ||
ಟ್ಟಿದಪಳೆ ಬೀದಿಯೊಳ್ಬಗಿದು ಮುಂದಲೆಯೊಳ್ ಕಿಱುನೆಕ್ಕನಿಕ್ಕಿದ |
ಲ್ಲದೆ ಮಱೆದಾಕೆ ನಕ್ಕೞಿವಳೇ ಸುಡು[4]ವಳ್[4] ಗಳ ಗಾಳುಗಂಡನಂ ||೧೦೦||

ವ|| ಅದಲ್ಲದೆಯುಂ

[5]ಬರೆದ[5]ಗೆಯ್ಯೇಱಿದಂ ಬಸಿವ ಸೂಲಮನೇಱಿದನೊತ್ತಿಗೊಟ್ಟಮಂ |
ಕರೆದಭಿಮಾನಮಂ ಪೆಱಗೆ ಕೊಟ್ಟವನಟ್ಟಿಱಿದುಯ್ದು ರಾಗದಿಂ ||
ನೆರೆದನೆ ದೂಳಿಯೊಳ್ನೆರೆದನಾಕೆಯ ಹಾಸಮೊ ಬೊಮ್ಮಹಾಸಮೋ |
ತರುಣಿಯ ತೋಳೊಬಾಳೊಸುಡುಸೂಳೆಯಕೂಟಮೊಕಾಳಕೂಟಮೋ||

ಪಾ— 1 ಹುವಲ್ತೇ. ಗ|| 2 ಕೂಡಿಸಿ. ಗ|| 3 ಪೊಜಗಾಗೆ. ಗ|| 4 ವೆಂ. ಕ|| ಗ|| 5 ಬರಗಡೆ. ಗ||

ವ॥ ಎಂದು ವಿರಕ್ತನಾದಂ. ಮತ್ತೊರ್ವಂ ನೀನೀಗಳಾಕೆಯ ನಣ್ಪನೇಕೆ ಮಾಣ್ದೆಯೆಂದಾ ಕೆಳೆಯಂಗಿಂತೆಂದಂ:—

ನುಡಿಯೆಲ್ಲಂ ಹೊಲೆ ಸೂರುಳೊಳ್ಳಱಿ ಹೊಸಂತಿಲ್ಪೊಂಗೂಳಲ್ಪೆತ್ತುವಾ |
ಯ್ಕುಡಿನೀರೊರ್ವಗೆ ಕಮ್ಮನಪ್ಪ ಬಳ್ಳನೀರೂರೂರ ದೈವಂಗಳುಂ |
ಪಡಿಗೆತ್ತೊಡಿದುವೀಕೆಗಂಜಿ ವಿಟರೆಂದುಂ ಗೆಂಟು ತಮ್ಮಿಬ್ಬಿ ಸ |
ತ್ತೊಡವಿಾನಂಜಿನ ಪೆಣ್ಣ ಕಣ್ಗೆ ಹುಸಿಕಣ್ಣೀರಲ್ಲದೇಂ ಬರ್ಕುಮೋ ॥೧೦೨॥

ವ॥ ಅದಲ್ಲದೆಯುಂ

ಮನಮಂ ಬೆಟ್ಟಿತುಮಾಡಲೆಂದೆ ಬಿಡುವಳ್ ಬಲ್ಬೋಂಟಿಯಿಂ ಬೇಂಟದೊಳ್
ಮದಮಂ ಬೇಂಟಮನಾಗಳಂತೆ ಬಳೆವಳ್[1] ಬಲ್ಗೆಯ್ತದಿಂದೊತ್ತೆಯಾ ॥
ಣ್ಮನೊಳಂ ಮೊಯ್ಯನೆ ಮಾಱುವಾಕೆ ಭವಮಂ ಪೇೞ್ಮಾಱುಳೀಸಂತೆಯೊಳ್ |
ಧನಕಾನಾರ್ಜಿನಿವಳ್ಗೆ ದೈವವಱಿಗಿನ್ನೀಸೂಳೆಯಂ ಡಾಳೆಯುಂ ॥ ॥೧೦೩॥

ವ॥ ಮತ್ತಮೊರ್ವಂ ಕಾಮುಕಳಾಕೇಳೀಶೀಲನಿಂತೆಂದಂ:—

ನೆತ್ತಮನಾಡಿ ಸೋಲ್ತಧರಮಂ ಕಡುಪಿಂದೆನಗಿತ್ತು ಕೊಳ್ವ ತಾಂ |
ಮತ್ತಬಿತ್ತೀನ ಮತ್ತು ನಗುತುಂ ತೆಗೆ[2]ವಾಂ[2]ಪಿಡಿಯಲ್ಕೆ ನೊಂದು ಬೈ ॥
ಯುತ್ತಮೆ ಮತ್ತೆಯುಂ ಕುಡುವ ಸೊಲ್ವುದು ಸೊಲ್ವುದೆ ನುತ್ತೆ ಮೋದಿಕಾ |
ಡುತ್ತುಮೆ ಮತ್ತೆ ಕೊಳ್ವ ಕಿಳಕಿಂಚಿತಮೊಪ್ಪುವುದೆನ್ನ ನಲ್ಲಳಾ ॥೧೦೪॥

ವ॥ ಮತ್ತಮೊರ್ವಸೌಭಾಗ್ಯಭವನಂ

ತಡೆದಾಂ ಪೋಗೆ ಸಗರ್ವಮುಡ್ಡಮಿಡುವಳ್ ವಕ್ತ್ರಾಬ್ಜಮಂ ಜರ್ಬುವಳ್
ಕುಡಿವುರ್ಬಿಂ ಕುಚವಸ್ತ್ರಮಂ ತೆಗೆಯೆ ಸೂಸನ್ನಂ ನಗು[3]ತ್ತಿರ್ಪಳು ॥
ಳ್ತುಡೆಯಂ ಮೆಲ್ಲನೆ ಲೀಲೆಯಿಂ ಸೆಳೆದೊಡೆನ್ನಂ ಸಸ್ಪೃಹಂ [4]ಕೊಳ್ವ[4]ವೊಲ್ |
ಕಡೆಗಣ್ಣಿಂದಮೆ [5]ಕೂಂ[5]ಕುವಳ್ ಸಹಜವಿಬ್ಬೋಕಮೆನ್ನಾಕೆಯಾ ॥

---

ಪಾ— 1 ಮನೆಯುಂ ಬಿಟ್ಟುವನ್ಯೈದನೆಂದು ಬಳೆವಳ್ ಬಲ್ಹೋಂಟಿಯುಂ (ಬಲ್ಹೊದಿಯುಂ) ಬೇರಮೊಳ್| ಮನಮಂ ಬೆಟ್ಟಿತುಮಾಡಲೆಂದು ಮುನಿವಳ್. ಖ॥
2 ತಾಂ ಕ॥ 3 ತ್ತಂ| ಸಡಿಲ್ಪ. ಕ॥ 4 ಕೊಲ್ವ. ಗ॥ 5 ಕೊಂ. ಖ॥

ವ॥ ಎಂಬನಂತರಂ ಭಿನ್ನರುಚಿಗಳಪ್ಪ ವಾಚಾಳವಿಟಜನಂಗಳಲ್ಲದೆ,

ಕರೆಯದೆ ಕಾಡಿ ಕಂಟಿಸುವ ಕೂಂಟಣಿಯುಂ[1]ನೊಣೆಗಚ್ಚಿ[1] ತಿಂಗೆ ಬೆಂ ।
ಗುರುಚಿ ಬಳಾರಿ ಬಾಡಿಸುಗೆ ಚಂಡಿಕೆ ನುಂಗುಗೆ ಮಿಟ್ತು ತುತ್ತುಗ ॥
ಬಿಕ್ಕುಳಿಸುಗೆ ಕಾಳಿ ಕೆೞ್ಗೞಿಯುಮಂ ಮುಚ್ಚಿದಿಕ್ಕುಗೆ ಮಾರಿ ಭೈರವಂ ।
ಹರಹುಗೆ ಮೋಳೆಯುಂ ಮುಱಿಗೆ ಮಾಳಬೆಗಿಂದು ಮೊಗಾರಮೆತ್ತುವೆಂ॥೧೦೭॥

ಗಾಳಿಸು ಗೆಲ್ವನಂ ಹರಡು ಹೂಡಿಗನಂ ಸುಲಿ ಸುತ್ತುಗಾಱನಂ ।
ತಾಳಿಸು ತೇಪನಂ ಕುಡವೆ ಕಾಡುವನಂ ರಸಬೋನವೆತ್ತು ಮಾ ॥
ಕಾಳಿಗೆ ಡಾಳನಂ [2]ನೆ[2]ಗಪ್ರ ಟಕ್ಕಿಪನಂ ತುಟಿ ಮೇಕುದೋರ್ಪನಂ ।
ಮಾಳಬೆಗಿಕ್ಕು ಪೂಚಿ ಪ್ರಸಿಪನಂ ಪೊಸೆದಿಕ್ಕುಗೆ [3]ಪಚ್ಚೆಗಾಜನಂ[3] ॥

ವ॥ ಎಂಬ ದರಿದ್ರವಿಟವೇಶ್ಯಾಲಾಪಂಗಳುಮನಲ್ಲಲ್ಲಿಗೆ ನಿಂದು ಕೇಳು
ತ್ತುಂ ಮಚ್ಚತ್ತುಮುಚಿತಾನುಚಿತಚೇಷ್ಟೆಗಳುಮಂ ಪ್ರಚ್ಛನ್ನದಿಂ ನೋ
ಡುತ್ತುಂ ನಾಗರಿಕಾದಿಚತುರಜನಂಗಳನಾಲಿಸುತ್ತುಂ ಕಂದರ್ಪದೇವಂ ಬ
ಪಾರ್ಗಳೊರ್ವರ್ಗಳ ಮೊಗದ ಸುಣ್ಣಂಗಂ ಕಣ್ಣಬೆಳ್ಪಂಗಮೊತ್ತೆಯಿಟ್ಟು ಗೊ
ಟ್ಟಗಿರಲೆಸೆಗಿ ಪರಿತಂದು ವಿದೂಷಕಂ ಸತ್ತನೆಂದು ಭಯಮನಭಿನಯಿಸೆ,

ಕಾವುದು ದೇವ ಯಾಚಕರನಂಜದಿರಂಜದಿರೇಕೆ ನೇಲ್ವ ತೋ ।
ಳ್ವಾವಲೊ [4]ಮ[4]ತ್ತವಾರಣದ ಸೋಂಡಿಲೊ ಕಾದಿದರ್ವೃತ್ತಿನಿಂದ ಪೆ॥
ರ್ಚಾರ್ವೆರತೊಡ್ಡಗೊಂಡು ಪ್ರತಿಮಾಟ್ಟ್ಯಪ್ರೋಪೋದೊಡೆಪೊಯ್ದವೆನ್ನನೋ
ಪೋವತಿಭೀತಿಯಾದಪುದು ಸೋಂಕೆಯು ಸೇರ್ವೆರ್ಗಲೆಗಂಡು ಭೂಪತೀ॥೧೦೮॥

ವ॥ ಎಂಬುದಂ ಕಟಕಿಯ [5]ಕಡಾರಂ ಕೊಯ್ದುದೆಂಬವನಂತೆ[5]ಗೆಯ್ದು ನಿ
ನ್ನ ಸಾವು ಪುಸಿಯಿದಂ ಕೇಳ್ದರಂ ನಗೆಯು ಕೈಯೊಳ್ ಬಿರಿಸು ಸಾವಂತೆ ಮಾ
ಡಿದೆಯೆಂದರಸಂ ನುಡಿಯುತ್ತುಂ ಬರೆ; ಮತ್ತೊಂದೆಡೆಯೊಳ್,

ಅಡರ್ದ* ಕುಚದ್ವಯಂ ದಯಿತೆ ಬಿದುರ್ವಿದೇಕೆನೆ ಬರ್ದಯೆಂಬಳಂ।
ತಡಿಗಡಿಗೋಪ ನಿಂ ಸರಸಕಾಮನಿವಾಸದೊಳಿಟ್ಟ ಕೈಯುನಿಂ ॥

---

ಪಾ— 1 ನೊಣಗಚ್ಚಿ. ಕ॥ ಖ॥ 2 ತೆ. ಕ॥ 3 ಪಚ್ಚಕಾಜನಂ. ಕ॥ ಗ॥
4 ಚಿ. ಗ॥ 5 ಕಟರಕೊಯ್ದಂತೆ. ಕ॥ ಗ॥

ಪಿಡಿದಿರೆ ತವೆಕ್ಕೆಳಟ್ಟು ಸವಿದೋಱುವ ದೂಸಱಿನೊಂದಹರ್ನಿಶಂ ।
ಕೆಡೆದಪ್ರುವಿಲ್ಲಿಗಾಸವಿಗೆ ಪೆರ್ಮೊಲೆಯಲ್ಲದೊಡಿಂತು ಬೀೞ್ಗುಮೋ ॥೧೦೯॥

ವ॥ ಮತ್ತೊರ್ವನೊಳ್ಕಾಡಿ ಮುಳಿಸಿನೊಳ್[1]ಮಿಱು[1]ಯಿಕ್ಕಿ ಕಾಡುವ ಕಂಡುಬೊಜಗನಂ ಪಿಡಿದು,

ಜಗುಳ್ವಿಯಿದಿರ್ಚಿ ಸಬ್ಬುಮನಗಿಲ್ಲದ ದೋಷಮನಿಟ್ಟು ಹಟ್ಟಿಗಾ ।
ಳೆ ಗಳಹಿಯೆಂಬುದಂ ಕರೆಯದಿದಿರ್ದೊಡೆ ನೀಂ ನಮ್ಮನೆಗಂ ಕಮಪ್ಪಿನಂ ॥
ಜಗಳಮಿಯೆಂದೊಡೊಪ್ಪಿಸಿದ ನಿನ್ನಯ ನಣ್ಪೆ ದಲೆಂದು ತಂದ ಹು ।
ಟ್ಟಿಗೆಯಿಱಿದೀೞೆಕ್ಕೆಳಂಗೞಿದು ಸೇದೆಯು ಬಾವಿಯೊ ಬಂದ[2]ದಾವೆ[2]ಯೋ ॥

ವ॥ ಮತ್ತಮೊರ್ವಳ್ ಬಿಡದೆ ಪುರುಡಿಸಿ ಪಿಡಿಯೆ ಪಿಡಿಯೆಯುಮೊಟ್ಟೈಸಿ ಪೋಪ ಬೊಜಗನಂ ಬಡಿದಿಂತೆಂದಳ್:—

ಆನೆತೆಯಿಱ್ಚೆ ನೀಂ ತಳದ*ರ್ದೊತ್ತಿದುದಿಂತಿಸು ನೀಂ ಕೊರಲ್ಗೆ ಬಿ ।
ಳ್ಗವಿಯ ಪ್ರೇಮ್ನೆ ನೀಂ ಕುಡುವ ಹುಟ್ಟಿಗೆ ಕಣ್ಬನಿಯಿಂದೆ ನಾಂಗುಮೋ ॥
ಗೋವನೆಯುಪ್ಪಿ[3]ಯಿಪ್ರೊಡಿರು[3] ಪೋಪ್ರೊಡೆ ಪೋಗಿನಿ[4]ತೇಕೆ ನಾಯ್ಗೆ ತಂ
ಗಿವುದೊ ಕಾಗೆ[5]ಗಿವುದೊ ರಸಾಯನಯುಕ್ತದ ಸಾರಭೋಜನಂ[5] ॥೧೧೧॥

ವ॥ ಮತ್ತಮೊರ್ವಳೊಂದೆಡೆಯೊಳ್

ಕಿತವಿಯಿದೆಲ್ಲಿಗಂಗಡಿಗೆ ತಂಬುಲಮಂ ಪಿಡಿ ಕೆಮ್ಮಗೆಮ್ಮಳೇಂ ।
ಸಿತಗೆ[6]ಯಿ[6]ದಾವ ಮಾತು ನಡೆ ಪೋಗಿಯೆ ಬಾರೆನೆ ಬಾರ[7]ದಿಂದೆ[7]ಯಾ ॥
ಱತ್ತಿಬಡೆದುಂ ಮಗುಟ್ಕಿಗುಱೆ ಬಂದಪೆ ಬಂದಪೆನೊಲ್ಲೆನೆಲ್ಲಿ ಹು ।
ಟ್ಟಿತೊ ಶಿವಧರ್ಮವೆಂದೆಡೆವಳೋವರಿಗೊರ್ವನನೊರ್ವಳೞ್ತಿಯಿಂ ॥

ವ॥ ಮತ್ತಮೊಂದೆಡೆಯೊಳ್

ನಡೆನಡೆವಂತಿರೇಂ ಭಯಮೊ [8]ನೋಡಿರ್[8] ನೋಟ್ಪೊಡೆ ಪೆಣ್ಣೆನಣ್ಪಿನಿಂ ।

ಪಾ— 1 ಮುಳಿಸ್ತ್ರೀ ಕ; ಮುಳ್ಗುಮಿಳಿ. ಗ॥ 2 ತಾವಿ. ಕ॥ ಗ॥ 3 ಯುಪ್ಪದಿರು. ಕ॥ 4 ಪೋಯಿನಿ. ಕ॥ 5 ಗೇವುವನಿದೇವುದೊ ಕತ್ತೆಗೆ ಕ್ಷೀರಭೋಜನಂ. ಕ॥ ಗ॥ 6 ಗಿ. ಕ॥ 7 ನಂದಿ. ಕ॥ ಗ॥ 8 ನೋಡಮೊ. ಗ॥

ನುಡಿ ನುಡಿವಂತು ಬಕುರ್ಡಿಯಿ ಬಾರಿಲೆ ಬರ್ಪೊಡೆ ಮಾವೆ ಮಾನವಂ॥
ಬಿಡುಬಿಡುನಂತಿರೇಱದಿಕೆಗಂಡನೆ ಗಂಡನೆ ಕೇಳ ಪೇೞು 'ಪೇ'।
ೞ್ವೊಡೆ ಕವಿರಾಜಕುಂಜರನ ಕಬ್ಬಮ ಕೆಮ್ಮನಿದೇಕೆ ಸಮ್ಮದಂ ॥೧೧೩॥

ವ॥ ಅಂತು ಪೊಲ್ಲಕೆಯ್ಯ ಕಾದಲಳನುಱದುಱದೇೞಿಂ ನುಡಿದು ಪೋದಂ. ಬಂದಿಸೆಯೊಳೊರ್ವಳ್ ರತಲಾಂಛನವುಂ ಕಂಡು ಕಡುಮುಳಿದು 'ಪ'ರ್ದಿಡುವ ಸಮಸಂಕರಮುಂ ಪಡಿಯುಮಂ ಕೈಕೊಳ್ಳದಿರ್ದ ಬೊಜಂಗನಲ್ಲಿಗೆ ತಾನೆ ಪೋಗಿ,

ನೆನೆಯದಿರೇನುಮಂ ನೆನೆವೆಯಪ್ಪೊಡೆ ನೀಂ ನೆನೆಯೆನ್ನ ಮಾಳ್ಪ ಬ ।
ರ್ದನೆ ನೆನೆವಂದು ಸೂಳೆತನವೆಂಬುದೆ ಕಷ್ಟಮದರ್ಕಿದೇಕೆ ಪೇೞ್ ॥
ಮನಕತವೆನ್ನ ಮಾಪ್ಪಿ ಬವಗೇಂ ಪೆಱತಾದುದೆ ಬೇಡ ಕೆಮ್ಮಗಂ ।
ಮನೆ ಗುಸುಟೇಕೆ ತನ್ನ ಸುಖಕಲ್ಲದೆ ಕೇಳಕೆಯಾರ ಬಿಟ್ಟಿಯೋ ॥೧೧೪॥

ವ॥ ಎಂದು ಬಸಿದುಮುಸಿದುಮಂ ತೋಱಿ ನುಡಿದೊಡಂಬಡಿಸಿದಳಾಪ್ರಘಟ್ಟಕವುಂ ಕಂಡು ಮಕರಂದನರಸಂಗಿಂತೆಂದಂ:—

ಪಶಿದುಣ್ಬ ಪೆಣ್ಣೊಳದಾರ್ ।
ಗಡಿನೊಪ್ಪಮೆ ಸಾಲ್ವುದುಱದುಮೊಳ್ಪಱಸುವನೇಂ ॥
ಕಡುಗಾಂಪನೊ ತಣ್ಣಾಱಿಂ ।
ಪಡವಿನೊಳಲೆಗಟ್ಟಿ ಮುಟ್ಟಿ ಪಶಿದಱಸುವ್ರದೇ ॥ ॥೧೧೫॥

ವ॥ ಮತ್ತೊರ್ವಳ್ ನೀನೇಕೆಯಿಂತಾದೆಯೆಂದು ಮೊಗಮುಱಿದಾಕೆಗಿಂತೆಂದಳ್:—

ನಂಬಿಸಲಾನೆ ಬಲ್ಲೆ ನಿದಿರಂ ಧನಮುಂ ಪಶೆದಾನೆ ಬಲ್ಲೆ ನಿ ।
ನ್ನೆಂಬುದೆ ಲಜ್ಜೆ ಪಚ್ಚೆಯ ಪಸುಮಣಿಯುಂ 'ಕುಡಲಿ'ಲ್ಲದಂತು ಬಾ ॥
ಯ್ತಂಬುಲಮೆಂಬುದಂ ಪಶೆಯದಂತುಟೆ ಮಾಱಿಡೆಗಾಣದಂತಿರ ।
ಟ್ಟಂಬರಿಗೊಂಡು ತೀದಪುದು ಬೇಟಮಿದೆನ್ನಯ ಪಾಪಮಲ್ಲದೇ ॥೧೧೬॥

ಪಾ— 1 ಕೇ. ಕ॥ 2 ಪೊ. ಕ॥ ಗ॥ 3 ತಡವಿ. ಗ॥

ವ ॥ ಅದಂ ಕೇೞ್ದು ವಿದೂಷಕನೀಕೆ [1]ಹುಟ್ಟುಗೆಟ್ಟ[1] ಹುಟ್ಟಗೆಯಂತೆ ಹಡಣವೋಣಗಿದ ಹೞೆಯ ಸಿದ್ದಿಗೆಯಂತೊಣಕುಟ್ಟದೆ ಪತ್ತಿದ ಹಾೞೂರ ನಾಯಂತೆ[2]ಯೊಡಲಂ ಪತ್ತಿದ[2] ತೊನ್ನರ ತುಟಿಯಂತೆ ಕಣ್ಣಂಬು ಬಿರ್ದ ಕ[3]ಬ್ಬಾಗಳೆಯಂತೆ[3] ಕಾಗೆ ಹೞಿವ ಹೞುಗಲಂತೆ ಸುಸಿಲ್ದೊಱೆಯಂ ದಾಂಟಿಸಲಾಱದಡಿ[4]ಸತ್ತೊಡೆ[4] ತನ್ನ ದೌರ್ಭಾಗ್ಯವಂ ಬೇಟದ ಮೇಲೆ ನೆವಮಿಕ್ಕಿದಪಳೆಂದರಸನಂ ನಗಿಸಿದಂ. ಅತ್ತ ಮತ್ತೊಂದೆಸೆಯೊಳ್ ॥೧೧೭॥

ನುಡಿವಪೆಯಿಲ್ಲ ನೀಂ ಮಗಳೆ ನಿನ್ನನಿದೇಂ ಪೊಱೆಪತ್ತೊ ಬಲ್ಗರಂ ।
ಪಿಡಿದುದೊ ಕಂದಿ ಕುಂದಿದೆಯಿದೇನುರಿ ಕೊಂಡುದೊ ಕೊಂಡುದೆನ್ನನೆಂ ॥
ದೊಡಮದೆ ಮಾತೆ ಮತ್ತೆ ಪೆಱತಾವುದನೆಂಬೆನೊ ಬೇಟಮೆಂದೊಡಂ ।
ಸುಡು ಗರಮೆಂದೊಡಂ ಸುಡುವ ದಳ್ಳುರಿಯೆಂದೊಡಮೊಂದೆಯಲ್ಲವೇ॥೧೧೮

ವ॥ ಮತ್ತೊಂದೆಸೆಯೊಳಗೊರ್ವ ಬೇಟಕಾತಿ ಬೇಟಕ್ಕೆ ಬೇಸತ್ತು ಕೆಳದಿಗಿಂತೆಂದಳ್:—

ಸತ್ತೊಡೆ ಪೋಕುಮಲ್ಲದೆಡೆಯೊಳ್ಕಡಿವೋಕುಮೆ ಬೇಟವಕ್ಕ ಬೇ ।
ಸತ್ತೊಡೆ ಮತ್ತೆ ಲಜ್ಜೆ ಗಡ ಮತ್ತೆ ಛಲಂ ಗಡ ಮತ್ತೆ ನಾಣ್ಗಡಂ ॥
ಮತ್ತೆ ಬೊಜಂಗಗೊಟ್ಟೆ ಗಡ ಮತ್ತೆ ಸೊಗಂ ಗಡ ಮತ್ತೆ ತಾಯ್ಗಡಂ ।
ಮತ್ತೆ ಬ*ರ್ದುಂಕುವಾಸೆ ಗಡ ಪೇೞಿದು ಬೇಟಮೊ ದೈವಕಾಟಮೋ ॥

ವ॥ ಮತ್ತಮೊಂದು ತಾಣದೊಳ್

ಅಡಿಯನದೇಕೆ ದಂಡೆಗೊಳುತಿರ್ಪೆಯೀೞ್ದುಗುಳಿಂದೆ ಸೋವಡಂ ।
ತೊಡೆ ತೊಡೆಯಿಂದಿಱುಂಕದಿರು ಮೆಲ್ಲನೆ ಪಾಯ್ದುಪೆಱ್ಗೊಂಡುಗರ್ಚದಿರ್ ॥
ಪಿಡಿಯೆನಡರ್ತು ಬಾಯ್ದೆಱೆಯದಿರ್ ಮೊಲೆಯಂ ನಿನಗಬ್ಬೆಯಕ್ಕಟಾ ।
ಕುಡಳೆಯಿದೇಕೆ ಬಿಕ್ಕಿ ಬಿರಿದತ್ತಪೆಯೆಂದನದೊರ್ವ[5]ನೂರಿಚಂ[5] ॥೧೨೦॥

ವ॥ ಎನೆ ಕೇೞ್ದು ಕಣ್ಣಗೊಂಟಣಿ ಕಿಡಿಯಂ ಮೆಟ್ಟಿದಂತಾಗೆ ಚಾಕಿಗೆಯ ಬಾಗಿಲ್ಗೆ ಬಂದಿಂತೆಂದಳ್:—

---

ಪಾ— 1 ಹುಟ್ಟಿಜಂಗೆಟ್ಟು ಗ॥ 2 ಬತ್ತಿದೊಡಲಭ್ಯಂತರಂ ಗ॥ 3 ಕಬ್ಬಾ ಯಂತೆ. ಗ॥; ಕಬ್ಬಾಯು. ಕ॥ 4 ಸತ್ತೋಡುತುಂ. ಗ॥ 5 ಮಾರಿಚಂ. ಕ॥ ಗ॥

ಕೇಳ ತನಕ್ಕೆ ನೀನಿನಿ[1]ದನಿಕ್ಕದೆ ಗರ್ಭದೊಳಿಂತು ಕೊಲ್ವರೇ ।
ನೂಳ್ತನಂಗಳಂ ಸರಸವಿಲ್ಲದೆ ತಳ್ತೊಡನಿತ್ತು ಪೋಪುದಿ ॥
ನ್ನಾಳಿಯರೊತ್ತಿನೀವಂಗವು ನಿನ್ನೆ*ರ್ದೆಗೆಯ್ದೊಡನೆರ್ದು ಪೋಪ ಬೆ ।
ಳ್ಳಾಳ್ ಭೋಜಂಗ ಬೂತೆಪಿಡಿ ನೀಂ ಕುಡುವೊತ್ತೆಯಿನಿಕ್ಕುಕಾಡಿನೊಳ್[1]॥(?)

ವ॥ ಮತ್ತಮೊರ್ವ ನಿರ್ಲಜ್ಜಕುಂಟಣಿ

ಮತ್ತೆ ಭೋಜಂಗರಿಲ್ಲ [2]ಪೊಱಗೊ[2]ಚ್ಚತವೇಂ[3]ನಿನಗುಂಟು ತೋಳ್[3] ಚೆ।
ಕ್ಕೊತ್ತೆಗೆ ಪೊಕ್ಕೆಯಿಂತು [4]ಸುನಿ[4]ಯಂತಿರೆ ನಿಲ್ವರೆ ನೂಳ್ ಕೇಳರೋ ॥
ಬತ್ತೆಗೆ ನಾಣ್ಚೆಯಿಂ ಪೊಱಮಡಾಂ ಮೊಱೆಯಿಟ್ಟಪೆನೆಂಗು ಸುತ್ತಿದಳ್ ।
ಮುತ್ತಿದಳಬ್ಬೆ ಚಾಕಿಗೆಯನೊರ್ಬಳ್ ಮಾರಿಯ ಮೂರಿಯಂದದಿಂ॥೧೭೨॥

ವ ॥ ಮತ್ತಮೊರ್ವಳ್ ಮಗಳಂ ನೀರುಂ ಮೊಱುಮಾಡಿ ಕೊಳಲಣ್ಮದೆ ಚೆಮರಗೊಂಟಣಿ

ನಾಣಿಲಿ ನಿಟ್ಟುರಂ ಸಿತಗನಾಟವಿಟಂ ತುದಿಗೋಡ ಪೋಱು ನಿ ।
ನ್ನಾಣೆ ಗಡಾಗಡುಂ ನಿನಗೆ ಕೂರದರೊಳ್ ಬೆರಸಿರ್ಪನಾತನೇಂ ॥
ಮಾಣಿಕದನ್ನರಪ್ಪ ಪೊಸಚೆನ್ನರನೀಂಗಳ್ ತರ್ಪೆನೆನ್ನ ನೇ ।
ರಾಣಿಯ ಹೊನ್ನೆಬೇಡವನ ನಣ್ಪಿದನಾಂ ಸೆಱಗೊಡ್ಡಿ ಬೇಡುವೆಂ ॥೧೭೩॥

ವ॥ ಮತ್ತೊಂದೆಡೆಯೊಳ್,

ರತಮನೆ ಮಧ್ಯದೊಳ್ ಪುಱುಗು ತಾಂ ಮಗುವಂ ಮೊಲೆಯೂಡಲೀಶಚುಂ
ಬಿತವದನಾಬ್ಜಮಂ ತೆಗೆದು ತಾಂ ಶಿಶುವಂ [5]ಪೊದಿಸಲ್ಕೆ[5] ಬಲ್ಪಿನಿಂ ॥
ಪತಿಪರಿರಂಭಮಂ ಬಿಡಿಸಿ ಕೂಸಳ್ ನಂಬಿಸಲಿರ್ದ ನೂಳ್ವಾ ।
ಣತಿಯೆರಡರ್ಕೆ ಬಿಟ್ಟ ಕಱುವೋಲಪೆಯಾಡಿದಳೊಂದುಗೇಹದೊಳ್॥೧೭೪॥

---

ಪಾ— 1 ಸನಿಕ್ಕಗೆ ಗರ್ಭದೊಳಂಸಕಲ್ವರೆ......ಸರಸವಲ್ಲದೆ ತುತ್ತಿಡೆಯಿತ್ತು ಪೋಪುದೇಂ॥ ನಾ......ಮನವು......ನಿಡುವೊತ್ತೆಯದೆ(ನೆ)ಂಬ ತಾಱರೆ. ಗ॥
2 ಹೊಱಸೊ. ಗ॥ 3 ನಿನಗುಟ್ಟುಕೊಳ್ಳ. ಗ॥ 4 ಶನಿ. ಗ॥
5 ಸುಡಿಪಲ್ಕೆ; ಸುದಿಪಕ್ಕೆ. ಗ॥

ವ॥ ಮತ್ತಮೊಂದೆಡೆಯೊಳೊತ್ತಗೆ ನಿಂದ ವೃದ್ಧವೇಶ್ಯೆಯಂ ನಾಣ್ಚಿಸಲೆಂ
ದು ವಿದೂಷಕಂ ಪೋಗಿ,

ಪಿಡಿ ನಡೆಯೊತ್ತಯೇಂ ನಿನಗೆ ನೀನೊಸೆದಿತ್ತುದೆ ತೋಱ ಸೂಳೆಯಾ ।
ಪಡೆ ಸುಡು ಕಾಣ ಕಣ್ಗೊಡೆದುವೇ ಹರೆಯಂ ಪಿರಿದಬ್ಬೆ ನೀಮುವೇಂ ॥
ಪಿಡಿವಿರೆ ಮೂರ್ಖನಪ್ಪ [1]ಧನಮಂ[1] ನಿಮಗೀಪೊಸವೆಂಡಿರಿರ್ದವೋಲ್ ।
ಕುಡುವರೆ ಕಾಯ್ಗಳಿಂದಱಿಯೆ ಪಣ್ಣಿನಿದೆಂಬುದನಣ್ಣ [2]ಕಾಣಿರೇ[2] ॥೧೨೫॥

ವ॥ ಎಂದು ಸೂೞ್ಮಾತನಾಡಿ ಸೋಲ್ತು ಕಂದರ್ಪದೇವಕಟಾಕ್ಷಪ್ರೇ
ಕ್ಷಿತಪೀಠಮರ್ದಕನಿಂದರ್ಧಚಂದ್ರನಂ ಪಡೆವುದುಮೊರ್ವಳೀಂಟಿಯುಮಾಱ
ದಿರೆ ಮಗುೞೆ ಕಳ್ಳನೊಱಗಿಕೊಂಡು ಕಾದಲಂನೀಡೆ ನೀಡುಂಭಾವಿಸಿ ನೋಡಿ,

ಪಿಡಿಯೆಲೆ ಬಾಲೆಯಿತ್ತಯಿದನೇಕೆಯೊ ಬಾಲಕಿ ದೈವ ತಾನೆ ಕಾ ।
ದಿಡಿಪುದು ನೋಡ ಕಲ್ಲೊಲೆಗೆ ಬಿತ್ತಿಯ ಬತ್ತಲೆದಾಱಿತೆನ್ನ ಬಾಯ್ ॥
[3]ಕುಡಿದಪೆನೆಂ[3]ದೊಡೇಂನುಡಿವ[4]ಳೋ[4]ಪ್ರಿಯನೊಳ್ವಧು ಮತ್ತಮಾತಿನೊಳ್।
ತೊಡಳೆಸೆಯಲ್ಕೆ ಕಂಡು ಮಣಿಪಾತ್ರದಮಧ್ಯದೊಳಿಂದುಬಿಂಬಮಂ ॥ (?)

ವ॥ ಮತ್ತಮೊಂದು ಪಣಿಗೇಹಾಂತರದೊಳ್

ಕರಜಾತಾರ್ದ್ರಕ್ಷತಂಕುಂಕುಮಲಿಖಿತಮನೋಮೋಹಯಂತ್ರಂಬೊಲಿಂಬಾ
ಗಿರೆ ಮೆಯ್ಯೊಳ್ಕೈಯ ಪಾತ್ರಂಕರಮೆಸೆಯೆ ರಣನ್ನೂಪುರಂಮುಕ್ತಕೇಶಂ॥
ಸ್ಮರಮಂತ್ರಾರಾಧನಾದೇವತೆಯೆ ಕುಣಿನವೋಲಾಡಿದಳ್ಪೀರ್ದ ಮದ್ಯಂ ।
ಸುರಿನಂತೂರುಪ್ರದೇಶಂಬಿಡಿದು ಬಿಡೆ ಪದಂ ಕಾಂತೆ ನಿರ್ಗ್ರಂಥದಿಂದಂ ॥

ವ॥ ಮತ್ತಮಲ್ಲಿ,

ಪೞಿಗಳ್ಳಂ ಕುಡಿದುರ್ಕಿ ಸೊರ್ಕಿಕೆಡೆದತ್ತೊರೊರ್ವರೊಳ್ಪೋರ್ದುಪೊ
ಯ್ದುಱೆಯುತ್ತಂಪಿಡಿಯುತ್ತುಮಿರ್ಪಗಣಿಕಾಸಂದೋಹದೋರಂತೆವೋಲ್॥
ನೆಱಲೇನಿರ್ದವೊ ಕಾಚಕುಟ್ಟಿಮತಳಾಂತರ್ದೇಶದೊಳ್ ಪಾಪದಿಂ ।
ದಿೞಿದಂತಾಗಳೆ ನಾರಿಯರ್ ನರಕದೊಳ್ಕೂಡುತ್ತುಮಿರ್ಪಂತೆವೋಲ್॥೧೨೮॥

---

ಪಾ— 1 ಮನಕಂ. ಗ॥ 2 ಲೋಕದೊಳ್. ಕ॥ 3 ಕಡಿವಪೆಯೆಂ. ಗ॥ 4 ಳಾ. ಗ॥

ವ ॥ ಮತ್ತಮೊಂದು ಮದನಮಂಗಳಮಂದಿರಮೆನಿಪ್ಪ ನಿಧುವನನಿಳಯದೊಳ್

ಪೊಡಱೆ ಕುಚಮೊಂದು ಕಾಂತನ ।
ಮೃದುಕರಪಲ್ಲವಮನುಱಿದ ಕುಚಕಕೂಟದೊಳೊ ॥
ತ್ತಿದಳೆಣೆಗಾಣದೆ ಕರೆವಂ ।
ದದಿನೊಂದು ರಥಾಂಗಮುಲಿವ ಶಕುನಿಯನೋರ್ವಳ್ ॥ ॥೧೮॥

ವ॥ ಆಗಳ್

ಪಿಡಿದುಗುಳ್ದಧರಮನವ್ವೈತದ ।
ಕಡವರಮಂ ಕಂಡು ತೆಗೆಯೆ ವಿಟಸಾಧಕನಿಂ ॥
ಪಡರೆ ಮದನಂಗೆ ಪ್ರಯ್ಯು ।
ಲ್ಗುಡುವಂತೆವೊಲೊಗೆದುವವಳ ಕಳಗಳನಿನದಂ ॥ ॥೧೩೦॥

ವ॥ ಆಗಳ್

ಘುರುಘುರಿಸಿ ಪೀರ್ದು ಚುಂಬಿಸಿ ।
ಮುರಿದುಗುರಿಂ [1]ಸೀ(ಳ್ದು[1] ಸೆಳೆದು ಕೈವಿಟ್ಟಂ ಸುಂ ॥
ದರಿಯುರದ ಕರಿಯ [2]ಕಲೆವಡೆ[2] ।
ದರನೇಱಿಲ ಪಣ್ಣನೊಡೆದವೋಲ್ ತೋಱುವಿನಂ ॥ ॥೧೩೧॥

ವ॥ ಮತ್ತಮೊಂದು ಮುತ್ತಿನ ಮೊಗಸಾಲೆಯೊಳಗಣ ವೈಡೂರ್ಯವೇದಿಕಾಮಧ್ಯಸ್ಥಿತಮಂಚಾಗ್ರತಲ್ಪಪುಳಿನಸ್ಥಳದೊಳೊರ್ವಳ್

ಅಳಕಂ ತುಂಬಿವೊಲಾಡೆ ತುಂಬಿದ ಕುಚಂ [3]ಚಕ್ರಾಹ್ವ[3]ದಂತಾಡೆ ಕ ।
ಣ್ಣೊಳಮೀನಾಟಮನಾಡೆ ಮುದ್ದುಮೊಗಮಂಭೋಜಾತದಂತಾಡೆ [4]ಮೆಯ್॥
ತಿಳಿನೀರಾಟಮನಾಡೆ[4] ನೂಪುರಮರಾಳೋನ್ನಾದಮಾದ್ಯಕ್ಕೆ ಪೂ ।
ಗೊಳನೆದಾಡುವವೋಲದೇಂ ಮೆಱೆದಳೋ ಕಾಂತಾ[5]ಯತಪ್ರಾರ್ಥಿಯಂ[5]॥

ಪಾ— 1 ಪಿಡಿದು. ಕ॥ 2 ಕ (ಗ) ಡುವೊಡೆ. ಗ॥ 3 ಚಕ್ರಾಂಗ. ಕ॥
4 ನೀರ್ತಿಳಿನೀರಂತೊಗೆದಾಡೆ. ಗ॥ 5 ರತಿಪ್ರಾರ್ಥಿಯೊಳ್. ಕ॥ ಗ॥

ವ|| ಮತ್ತೊಂದು ಸುಧಾಧವಳಿತಸೌಧಾಗ್ರತಳದ ಕುಂಕುಮರಕ್ತಪ್ರಚ್ಛದಾಚ್ಛಾದಿತಶಯ್ಯಾತಳಮಧ್ಯಶಿಲಾತಳದೊಳ್

ಉಗುರೇಱಿಂ ಬಾಸುಳೊಂದಾಸುರಮೊಗೆಯೆ ಕರಂ ಬೀಗೆ ಬಿಂಬಾಧರಂ [1]ಪಾ | ಯ್ದುಗಿವನ್ನಂ ಬೆಂಗೆ ಪೊಯ್ದಾ[1] ಗುರುಕುಚಯುಗಳಂ ಸೊಪ್ಪುಸೊಪ್ಪಾಗೆ ಕಣ್ಗಳ್ || ಪುಗಿವನ್ನಂ ಪಾತದಿಂ ಪಿಳ್ಳನೆ ಪಿಳಿಪವೊಲಳ್ಕಾಡೆ ಮೆಯ್ ಕೇಳಿಕೃಷ್ಣೋ | ರಗನಂ ಪಿಂತಿಕ್ಕಿ ತನ್ನಂ ಪ್ರಿಯತಮಗರುಡಂ [2]ಕಿತ್ತವೋಲಲ್ಕುಡುತಿರ್ದಳ್[2] || ||೧೩೩||

ವ || ಮತ್ತಮೊಂದು ಸುರತಾಲಯದೊಳ್ ಮಣಿಪ್ರದೀಪಮಂಜರೀಪ್ರಭಾಭಾಸುರಪರಿಸ್ಫುಟಸ್ಫಟಿಕವೈಶದ್ಯಮಂಚಾಗ್ರದರ್ಶಿತ ಸುರತರಮಣೀಯ ರಮಣೋಪರಮಣಾರಕ್ತರೂಪೆ

ಸವಿದಪ್ಪಂ ನಿನ್ನುಮಂ ಕೇಳಲೆ [3]ವಧು[3]ಮಧುಬಿಂಬಾಧರಂ ಕಣ್ಗೆ ಕಣ್ಕೆ | ತ್ತುವವೋಲಾತ್ತಂ ಕೆತ್ತಿ ಕೈಕೂರುಗುರಿನುಗಿಯೆ ಮೇಣ್ ಕೈಯ್ದುಗೆಯ್ವಂತೆ ರೋಮಾಂ || ಚವನೆತ್ತಂ ತಾಳ್ದಿ ತಣ್ಪಿಂ ಸಡಿಲೆ ಮನಸಮೋಹಾಮೃತಂ ಮೆಯ್ಗಳಿಂ ಪೊ | ಣ್ಮುವವೋಲ್ ಘರ್ಮೋದ[4]ಪೂರಂ[4] ಬಿಡುತರೆ ನೆರೆದಳ್ ಕಾಂತನೊಳ್ಕಾಂತೆಯೊರ್ವಳ್ || ||೧೩೪||

ರಮಣಾಕೃಷ್ಟಾಳಕಾಗ್ರಾಳಿಪತತಿ ವಿಟವಿ[5]ಕ್ರಾಂ[5]ತಚುಕ್ತಾಧರಂ ಕೈ | ತ್ರಿಮಮೋಹಭ್ರಾಂತನೇತ್ರಂ ಕೃತಕಕರಲತಾನೃತ್ಯಗೀತಂ ವೃಥಾವಿ || ಭ್ರಮಮುದ್ಭ್ರೂಭಂಗರಮ್ಯಂ ಮಣಿತರುದಿತರೋಷೋತ್ಕಟಂ ಕುಟ್ಟಿನೀಕು | ಟ್ಟಮಿತಂ ಮತ್ತೊಂದು ಸೌಧಾಗ್ರದೊಳೊಪವಿದು[6]ದು[6]ಚ್ಛುಷ್ಕಸೀತ್ಕಾರಸಾರಂ || ||೧೩೫||

ವ|| ಮತ್ತೊಂದು ಚಂದ್ರಮರೀಚಿಚಂದನಚ್ಛಟಾಸಿಕ್ತವ್ಯಕ್ತರತಿರಮ್ಯಹರ್ಮ್ಯಾಂಗಣವೇದಿಕಾವಿಲಾಸ ಧವಳದುಕೂಲವಸನವಿಶದಶಯ್ಯಾಮನೋಹರಮಣಿಮಂಚದೊಳ್,

ಪಾ— 1 ಬಾಯುಗೆಯಿಂಕನ್ನೈಸೆಪೊಯ್ಲಿಂ(ಯ್ದಿಂ). ಗ|| 2 ಗೆತ್ತುಕೂಡಿರ್ದಳೊರ್ವಳ್. ಖ|| 3 ಮಧು ಗ|| 4 ಭಾರಂ. ಕ|| 5 ಭ್ರಾಂ ಗ|| 6 ದೊ. ಕ,,ಗ||

ಕಾದಲನುಟ್ಟುದಂ ಸೆಳೆದೊಡೆನ್ನುಮನೆನ್ನ ಮೊಗಕ್ಕೆ ಸೋಲ್ತು ತಾ।
ನಾದವೊಲಿಂದು ನಾಣ್ಚಿಸಿದಪಂ ಸನುಯಂ[1]ಬಿಡೆ[1]ನೆಂದು ಚಂದ್ರನೊಳ್ ॥
ಕಾದುವವೊಲ್ ಸೆಱಂಗಿನೊಳೆ ಬೀಸಿದಳುಜ್ಜ್ವಲಪುಷ್ಪಮಾಲೆಯಿಂ ।
ಮೋದಿದಳೂದಿದಳ್ ತರುಣಿ ತಂಬುಲದಿಂದುಗಿದಿಟ್ಟಳಿಂದುವಂ ॥ ೧೩೬ ॥

ವ॥ ಅಂತುಮದನೆಲ್ಲಮನಲ್ಲಲ್ಲಿಗೆ ನಿಂದು ನೋಡುತ್ತುಂ ತನ್ನ ಸಚಿವರೊಳ್ ನುಡಿಯುತ್ತುಂ ಅರಸಂ ಬರ್ಪನ್ನೆಗಂ;

ಊದಿತ್ತುದ್ದಾಮರಾಮಾರತಿಪರಿಮಳಭಾರಾನ್ವಿತಂ ಕಾಮಮೋಹೋ।
ನ್ಮಾದ[2]ಮ್ಲಾ[2]ನಾಂಗನಾದೃಕ್ಕುವಲಯಮುಕುಳಾರಂಭಿ ಸಂಭುಕ್ತಕಾಂತಾ ॥
ಸ್ವೇದಾಸ್ವಾದಪ್ರಗಲ್ಭಂ ಸಮರತಸಮರಶ್ರಾಂತಸೀಮಂತಿನೀಸಾ।
ಮೋದಪ್ರೋನ್ಮಂದಮಂದಶ್ವಸಿತಮೃದು ಮರು[3]ನ್ಮಾರ್ಗಗಂ[3] ಮಾತರಿಶ್ವಂ॥

ವ ॥ ಅಂತು ವೇಳಾತಿಸಮಯದೊಳನ್ನೆಕಾಮಿನೀಸಮೂಹಂ ಸುರತಶ್ರಾಂತಸುಪ್ತಂ ದರ್ಶನೀಯಮಲ್ಲೆಂಬುದಂ ಮಾನವಮದನಂಗಱಿಪಲೆಂದು ಬಂದಂತೆ ಬಂದಾಮಂದಮಾರುತಂ ತೀಡಲೊಡನೆ,

ಅಂತಪ್ಪಾ ರಾತ್ರಿಸಂಭೋಗಮನತಿಮುದದಿಂ ನೋಡಿಯುಂ ನಿರ್ವಿಕಾರ।
ಸ್ವಾಂತಂ ನರ್ಮಪ್ರಧಾನೋತ್ತಮಕರತಲಕರ್ಪೂರತಾಂಬೂಲದಾನಾ ॥
ತ್ಯಂತಾಭಿಖ್ಯಾನ್ವಿತಂ ಮನ್ನಿಸಿ ಕಳುಪಿ ಬೞಿಕ್ಕಂದು ಪೋದಂ ಜಯಶ್ರೀ।
ಕಾಂತೇಶಂ ತನ್ನ ರಾಜಾಲಯಕೆ ಜನನುತಂರೂಪಕಂದರ್ಪದೇವಂ॥ ೧೩೮ ॥

ಇದು ವಿದಿತಪ್ರಬಂಧವನವಿಹಾರಪರಿಣತ ಪರಮಜಿನಚರಣರಮ್ಯ[4]ಹೈಮಾ[4]ಚಲೋಚ್ಚಲಿತ
ನಖಮಯೂಖಮಂದಾಕಿನೀಮಜ್ಜನಾಸಕ್ತ ಸಂತತೋತ್ಸಿಕ್ತದಾನಾಮೋದ
ಮುದಿತಬುಧಮಧುಕರಪ್ರಕರ ಕವಿರಾಜಕುಂಜರ ವಿರಚಿತಮಪ್ಪ

ಶ್ರೀ ಲೀ ಲಾ ವ ತಿ ಯೊ ಳ್

ರಾತ್ರಿವಿಹಾರವರ್ಣನಂ

ದ್ವಿತೀಯಾಶ್ವಾಸಂ.

---

ಪಾ— 1 ಬಿಡೆವೆ. ಕ॥ 2 ಮ್ಲಾ ಖ॥ 3 ನ್ಮಂದಗಂ. ಕ॥ 4 ಹಮಾ್ಯ. ಕ॥

ಶ್ರೀಪತಿ ಫಣಿಶಯ್ಯೆಗೆ ಗಂ ।
ಗಾಪುಳಿನತಳಕ್ಕೆ ದಿವಿಜವಾರಣಹಂಸಂ ॥
ಪೋಪಂತೆ ಪೋಗಿ ಕ್ಷ[1]ತಿ[1]ಕುಲ ।
ದೀಪಂ ಪವಡಿಸಿದನಮಳಶಯ್ಯಾತಳದೊಳ್ ॥ ॥೧॥

ವ॥ ಅನ್ನೆಗಂ,

(ದ್ರುತವಿಳಂಬಿತವೃತ್ತಂ)

ತೊಡರೆ ಮೀನ್ ಮೃಗಲಾಂಛನಧೀವರಂ ।
ತಡಿಗೆ ಬೀಸಿದ ಜಾಲಮನೊತ್ತಿ[2]ತಂ ॥
ದ[3]ಡಸಿ ಬಾಂ[3]ಗೆಝ[3]ಯೊಳ್ ತೆಗೆವಂತೆವೋ ।
[4]ಲುಡುಗಿ[4]ವಂದುವು ತಣ್ಗದಿರೋಳಿಗಳ್ ॥ ॥೨॥

ವ॥ ಅಲ್ಲಿಂ ಬಱಯಿಂ,

[5]ವಾರುಣಿ[5] ಕಳ್ಳನೀಂಟಿ ಮಱದಿಕ್ಕಿದ ಬಟ್ಟಲೊ ಭೀತಿಯಿಂ ನಿಶಾ ।
ಸ್ವೈರಿಣಿ ಪೋಗೆ ಬಿರ್ದ ಕಿವಿಯೋಲೆಯ ಮೌಕ್ತಿಕಪತ್ರವೋ ನಭೋ ॥
ವಾರಣವೊಲ್ಲದೊಕ್ಕ ದಧಿಪಾಂಡುರಪಿಂಡವೊ ಪೇೞನಲ್ಕೆ ನೀ ।
ಹಾರಮಯೂಖಮಂಡಲಮದೇನೆಸೆದಿರ್ದ[6]ದೊ ಪಶ್ಚಿಮಾದ್ರಿಯೊಳ್ ॥೩॥

ವ॥ ಮತ್ತಮಿನಿಸಾನುಂ ಬೇಗದಿಂ,

ಪುಡಿಯಡರೆ ನಿಮಿರ್ದ ಪುತ್ತಿನ ।
ಕುಡಿ ಕೆಡೆದತ್ತಾಲವೊಲೆದುದದಱಡಿಯೊಳ್ ತೂಂ॥
ಕಡಿಪ ಮಿಗಂ ಮುಂದಣ್ಪೋ ।
ಗುರ್ಡಿಸಿದುದೋ ಪಡುವ ಪಡುವ ಮೃಗಲಾಂಛನನಾ ॥ ॥೪॥

ಪೊಳೆಪಿಂಬುವೋಯ್ತು ತಾರಗೆ ।
ಬೆಳಗುಱದುವು ಹಿಮಕರಂಗೆ ಮಾಯ್ದು ಚಕೋರಾ ॥

ಪಾ— 1 ತ. ಗ॥ 2 ದಂತ. ಗ॥ 3 ದೊಱ ಗ॥ 4 ಲೊಡನೆ. ಕ॥
5 ಧಾರಿಣಿ. ಕ॥ 6 ಯೊ. ಗ॥

ವಳ ಬೆಳಗಾದುವು ಕುಮುದಂ ।
ಗಳ ನಗೆಯುಗೆಯೆತ್ತಿ ಪೋಯ್ತು ಮುನ್ನೇಸಱಿನೊಳ್ ॥ ॥೫॥

ವ॥ ಅಲ್ಲಿಂ ಬೞಿಯಿಂ,

[1]ವಾರುಣಿಯನೊಲ್ದು ಮುಟ್ಟಿದ[1] ।
ಕಾರಣದಿಂ ಮುೞುಗುವಂತೆ ತನ್ನಯ ಪೞಿಯಂ ॥
ನೀರೊಳಲೆವಂತೆ ಪಶ್ಚಿಮ ।
ವಾರಿಧಿಯೊಳ್ ಮಗ್ನನಾದನಂದಮೃತಕರಂ ॥ ॥೬॥

ಭುವನಮನಾವಗಂ ಪುದಿದು ತೀವಿದ ತಣ್ಣೆಲರ್ ದಿಗ್ಗಳ್ ಪೊದಲ್ದು ಕೈ ।
ರವಮನನೂಮುಮೆಯ್ದೆ ಪೊಸಮಲ್ಲಿಗೆಯಾದುವು ಮೌಕ್ತಿಕಂಗಳಾ ॥
ದುವು ಸುರಸಿಂಧುವಾದುವು ಸುಧಾರ್ಣವವಾದುವು ಚಂದ್ರಕಾಂತಮಾ।
ದುವು ಹಿಮಮಾನುವಲ್ಲದೊಡೆ ಚಂದ್ರನ ಚಂದ್ರಿಕೆ ಮಾಯವಾದುವೇ ॥ ೭॥

ನಿರುಪಮಸುಕುಮಾರತೆಯಂ ।
ಧರಣಿಗೆ ನೆಱೆಯಱಿಪಲುಷ್ಣಕರನ ಕರಂಗಳ್ ॥
ಪರೆಯದ ಮುಟ್ಟದ ಮುನ್ನಮೆ ।
ಮುರುಟಿದುವೆನೆ ಮುಗಿದುವುತ್ಪಲಪ್ರಕರಂಗಳ್ ॥ ॥೮॥

ತಾರಗೆಯ ಕುಮುದಪನದ ಚಕ ।
ಕೋರಂಗಳ ಕಣ್ಗೆ ಕವಿದ ಕತ್ತಲೆಯೆನೆ ನೀ॥
ಹಾರಕರನಲಸಿ ಪಚ್ಚೆಗೆ ।
ಸಾರಲೊಡಂ ಮಗುೞೆ ಮೞ್ಗೆ ಪರ್ವಿತ್ತಾಗಳ್ ॥ ॥೯॥

ರಮಣಿವಸತಿಗಳನಿನನ ।
ಸ್ತಮಿಸಲೊಡಂ ಬಂದು ಪುಗಿಸಿ ಮಗುೞ್ದಿಂ ವಿಧುವ ॥
ಸ್ತಮಿಸೆ ಪೊಱಮಡಿಸಿ ಕಳಿದುದು ।
ತಿಮಿರಂ ಪಾಣ್ಬೆಯರ ದೂತನಾಗಲೆ ವೇೞ್ಕುಂ ॥ ॥೧೦॥

ಪಾ— 1 ಧಾರಿಣಿಯನೊಯ್ದು ಮುದ್ದಿಪ ಗ॥

ಬೆಳಗಾಗಲೆೞ್ದು ಗಜಿಸ್ರವ ।
ಗಿಳಿಗಳ ಜಱುಜಱುಸ ಪಿಕಂಗಳೆಳಸುವ ಕೋಕಂ ॥
ಗಳ ಕಳಕಳದಿನಿಸೊರ್ಗಿದ ।
ಕುಳಟೆಯರೆೞ್ಚತ್ತು ಭಯದೆ ತೆಳವೆಳಗಾವರ್ ॥ ॥೧೧॥

ರಸದ ಮಳಯಜದ ಘುಸೃಣದ ।
ಕುಸುಮದ ಕಪ್ಪುರದ ಕವಿವ ಸೊವಡಿಂಗಳಿಗಳ್ ॥
ಮುಸುಱೆ ನವನೀಲಪಟವಂ ।
ಮುಸುಕಿದವೋಲಸತಿಯೊರ್ವಳಡಿಯಿಡುತಿರ್ದಳ್ ॥ ॥೧೨॥

ವ॥ ಮತ್ತಮೊರ್ವಳ್

ಮೊಲೆವಿಣ್ಪಿಂ ಬಳ್ಕುತುಂ ಮೆಲ್ಲನೆ ಪದವಿಡುತುಂ ನೀಳ್ದಪಾಂಗಂಗಳಿಂದಿ। ಕೆರ್ಲನಂ ನೋಡುತ್ತುಮೆತ್ತಂ ಸುೞಿವ ನೆೞಲನಾರಯ್ಯುತುಂ ದೂರದಿಂ ಬ॥ [1]ಪುರ್[1]ಲಿಯಂ ಕರ್ಣಾವತಂಸಕ್ಕೆಳಸುವಳಿಗಳಂ ಸೋ[2]ವಿ[2]ನಿಂದಾಲಿಸುತ್ತುಂ। ಜಳವೇಣೀಭಾರದಿಂದೋಸರಿಸುವಮುಸುಕಂ ಸಾರ್ಚುತುಂಪಾಣ್ಬೈಪೋದಳ್

ಉಗುತುಂ ಪೂಮಾಲೆಯಂ ಸೋರ್ಮುಡಿಯಿನೆಡೆಗೆ ಬಿೞ್ಪಂಬವೋಲ್ ನೀವಿಯಂ ಸಾ । ವಗಿಸುತ್ತುಂ ತೂಕದಿಂದಂ ನಡೆಗಿಡಿಪ ನಿತಂಬಂಗಳಂ ಕಟ್ಟುವಂತ ॥ ಕ್ಷಿಗಳಂ ಮುಚ್ಚುತ್ತೆ ನಿದ್ರಾಜಡತೆಯಿನಡಿಗೋರೊರ್ಮೆ ಭೂಚಾಯೆಯುಂ ನುಂ । ಗುಗುಮೆಂಬಂತಾಗಳ್ಕೋರ್ದಯಭಯವಶದಿಂ ಪಾಣ್ಬೈಪೋತಂದಳೊರ್ವಳ್ ॥ ॥೧೪॥

ಪದುಳಿಸದಂಗಮೊೞ್ಚಱಿದ ಕಣ್ಮಲರಾಱದ ಸೇದೆ ಮಗ್ಗುಲಿ ।
ಕ್ಕದ ಪುಳಕಂಗಳಂಗದ ಬೆಮರ್ಮಿಡುಕೋಡದ ಪುರ್ಬು ಬೀಗಿ[3]ಬೀ ॥
ಯದ[3] ತುಟಿ ಕೆತ್ತುಗುಂದದ ಕುಚಂ ನಡುಕಂಗಿಡದೂರು ಗಂದಿಯೇ ।
ಬಿದ ಕರಘಾತವೊಪ್ಪೆ ಸುಸಿಲಿಂ ತಣಿದೊಯ್ಯನೆ ಜಾರೆ ಜಾಱಿದಳ್ ॥ ॥೧೫॥

ವ॥ ಮತ್ತಮೊರ್ವಳ್

---

ಪಾ— 1 ನ್ದು. ಗ॥ 2 ದು ಕ॥ 3 ಪೊಂಗದ. ಕ॥ ಚ॥

ಇನಿಯನನಲಂಪಿನಿಂ ತೆಗೆದು ಚುಂಬಿಸಿ ತಂಬುಲಮಿಕ್ಕಿ ಸುಯ್ದು ಪೊ ।
ಯ್ದನುವಿಸಿ ಕೂಡೆ ನೊಂದ ತುಟಿಯಂ ತುದಿನಾಲಗೆಯಿಂದೆ ಪತ್ತಿದಿಂ ॥
ಪನೆ ಸವಿವಂತಿರೀಂಟಿ ಕುಚದೊಳ್ ನಸು ನಾಂಟಿದ ತನ್ನ ಖಾಂಕವಮಂ ।
ತನುರುಹದೇಳ್ಗೆಯಿಂದೆಳ¹ಸಿ¹ ನೋಡುತದೇಂ ಕಿಱುಜೋಡೆಪ್ಪೋದಳೋ ॥

ನಸು ನೆನೆದೊಯ್ಯನುಳ್ಳಲರೆ ಪೋಳ್ದಲೆ ಕಂದದೆ ಕೂಸೆ ಕೆಂಪಿನಿಂ ।
ರಸವೊಸರ್ವಂತಿರೊಕ್ಕ ನಱುದಂಬುಲಕಂ ಕುರುಳಿಂ ಕನಲ್ದು ಬಿ ॥
ರ್ದಸೆವಲರ್ಗಂ ಮದಾಳಿ ಮೊರೆದೆರ್ದಱುಗುತ್ತಿರೆ ಬೀದಿಗಳ್ ಜನ ।
ಕ್ಕಸತಿಯರೆರ್ದು ಪೋದುವನೆ ಪೇಳ್ವವೊಲಿರ್ದುವು ಸುಪ್ರಭಾತದೊಳ್ ॥

ಉಗುಳ್ದುವು ಪೀರ್ದ ಕತ್ತಲೆಯನಟ್ಟಸಲಾಱದೆ ಕಾಱುವಂತೆ ಕಾ ।
ಡಿಗೆಗಳನಾಗಳೋಪವರ ಕೇಳಿಗಳಂ ಕೊರಲೆತ್ತಿ ನೋಡುವಂ ॥
ತೊಗೆದುವು ನೋಡಿ ನಾಣ್ಚಿ ತಲೆಯಂ ತೆಗೆವಂತಿರೆ ಪಾತ್ರಮಧ್ಯದೊಳ್ ।
ತೆಗೆದುಡುಗಿರ್ದುವೊಳ್ಗುಡಿಗಳಂ ರತದೀಪಿಕೆಗಳ್ ನಿಶಾಂತದೊಳ್ ॥೧೮॥

ವ॥ ಆಗಳೊಂದು ಸುರತಾಲಯದೊಳ್

ಕಡುನಲ್ಲಂ ನೆರೆದಪ್ಪೊಡೆಣ್ಣೆ ಸವೆದತ್ತಿಲ್ಲಿನ್ನು ಮೋವೆತ್ತ ಸೋ ।
ರ್ಮುಡಿಯಿಂ ಸೋರ್ದುದೊಪುಷ್ಪಮಾಲೆಯೆನುತುಂ ಮುಗ್ಧಾಕ್ಷಿ ಚಿಂತಾಂತರ
ಕ್ಕೆಡೆಯಾಗಿರ್ಪಿನಮೆರ್ದೆಱುಂಕೆಯೆಲರಿಂದುದ್ಬುದ್ಧ ಪಾರಾವತಂ ।
ಸೊಡರಂ ಪೊಯ್ದುದು ಕೇಳಲಾಕೆಯುಳಸಂ ತಾನಟ್ಟುವಟ್ಟಂತೆವೋಲ್॥೧೯॥

ವ॥ ಮತ್ತೊಂದೆಡೆಯೊಳ್

ಅವಚಱಿಸಿ ಪೋಯ್ದ ನೇಹಂ ।
ತವೆಯಲೊಡಂ ಗುಣಮನುರುಪಿ ಪಿರಿದಾಗಿರೆ ಪೆ ॥
ರ್ಚುವ ಸೊಡರ್ಗಳ ಪೆರ್ಚಂ ನಗು ।
ವವೊಲುಜ್ಜ್ವಳಿಸಿದುವು ವಿಮಳಮಣಿದೀಪಿಕೆಗಳ್ ॥ ॥೨೦॥

ವ॥ ಆಗಳ್ ಕುಮುದಕಾಮುಕನಗಲ್ಕೆಯೊಳ್ ಕುಮುದಿನಿಗೆ ನೆಗೆದ ಬಾ
ಷ್ಪಜಳಕಣಂಗಳಂತೆ ಮುಗುಳ್ದು ಮುಗಿವೆಸಳ್ಗಣ್ಗಳೊಳುಗುವ ತುಹಿನ

ಪಾ— 1 ವಿ. ಕ॥ ಗ.

ಕಳಿಕೆಗಳಿಂ ಕೆಸರ್ಮಸಗಿದ ಕುಮುದಕೇಸರದ ರಜದೊಳರ್ದ ಚರಣಾಚ
ಯಮಂ ಕೇಱಿಲಾವಱಿ ಪಱಿಸಂಡಿನೊಳ್ಬೆಂಡುನೆಗೆದು ಪೊರಳ್ದು ನರಳ್ದು
ಮೊರೆವ ಮಱಿದುಂಬಿಗಳ ಗಱಿಯಂ ಗಿಱ್ಱನೆ ತೆಗೆದು ನೆಗಪಿಯುಂ,
ಚೊಕ್ಕಳತನದಿಂ ಮಿಕ್ಕಲರ್ಗೆ ಮೊಗಸದಿರುಳುಣ್ಣದೊಡಲ ಪಸಿವಿಂಗೆ
ಪೊಯ್ದು ಬಿರ್ದಲರದ ಪುನ್ನಮಲ್ಲಿಯರಬಿರಿವ ಬಿಸರುಹದೆಸಳ್ಗ್ವರೆಯು
ನಸುದೆಱಪಿನೊಳ್ ಮುಸುಂಬನಿಟ್ಟು ಬೇಸರವಾಗದೊಸಗೆಗೆಂಪನುಣ್ಬ ಬಾ
ಕುಳಿದುಂಬಿಗಳ್ ಪೆಡವಲೆಯಂ ಪಿಡಿದು ಮುಂದ್ಯೈಸಿ ಮುಂದೆ ಕವಿವ ಮಧು
ಕರ್ದಮದೊಳರ್ದಿಯುಂ, ಉರಿಕೊಂಡ ವಿರಹಮುರಿಗಿರಲಾಱದೆ ಇರುಳೆಲ್ಲ
ಮಱಸಿ ಮಲುಮಲನುಱುಗಿ ಕೊಳಗೊಳಂಗಳೊಳ್ ತೊಱಲ್ದು ಒಱಲ್ದು
ಬೆಂಡಾಗಿ ಬಿರ್ದು ಜಕ್ಕನೆ ಜಱಿವ ಜಕ್ಕವಕ್ಕಿಗಳ ಪಕ್ಕೆಯೊಳ್ ಪೊಡರ್ದ
[1]ಪಕ್ಕ[1]ಕ್ಕೆ ಪಕ್ಕುಗೊಟ್ಟು ನೆಗಪಿ ರಥಾಂಗನಾಮಕ್ಕಿದುಚಿತವೆಂಬಂತವರ್ಂ
ಕಿ ನೂಂಕಿ ತಂದೊಂದೊಂದಱೊಳೊಡಗೂಡಿ ಬೇಟವಚ್ಚಿನೊಳಮರ್ಚಿ
ಪೂಡಿ ಕಾಮಮನೋರಥಮಂ ತೀರ್ಚಿಯುಂ, ಬಿಸಲತೆಯ ಕುಸುಮದೊಳ್
ಕಣ್ಗೆಯ್ದು ಕಳಹಂಸತರುಣನಂ ತೆರೆಗೊನೆಯ ತುಂತುರ್ವನಿಯಿಂ ಮೊಗ
ದೊಳೆ ತಳಿದು ತಳವೆಳಗಾಗಿಸಿಯುಂ, ಪುಳಿನತಳದೊಳುಪ್ಪವಡಿಸಿದ ರಾಜ
ಮರಾಳನಂ ತೊ[2]ವ್ರಿಡಿ[2]ದು ನೆಗಪಿ ಬಾಲಕಿಯರ್ಗೆ ನಡೆಗಲಿಸಲ್ ನಡೆಯೆಂ
ದು ನಡೆಯಿಸುವಂತೆ ಬಱವಿಡಿದು ನಡೆದು ಸೌಭಾಗ್ಯಭವನಾಂಗಣಂಗಳೊ
ಳಪ್ಪುಗಿಸಿಯುಂ, ಕೊನೆಗೊಂಬಿನ ಕೆಲದೆಲೆಗಳೊಳ್ ತಲೆಗರೆದು ಮೊರೆವ
ಮಧುಕರನಿಕುರುಂಬದ ಗಾನದಿಂ ಬೇನೆ ಮಸಗಿ ನರಳ್ದುಪ್ರವೆಸಿಸಿ ಭವನ
ಭಿತ್ತಿಗಳಂ ಪತ್ತಿ ಪೊರಟ್ವಿ ಪಿತ್ತಿಲ ಪೂಗಿಡುಗಳಂ ಪೊಸಕುಸುಮಮಂ ಜೆ
ಸಲೆಯಾಗಿಸಿಯುಂ, ಕೇಳೀನಿಳಯದ ಕೆಲದೊಳ್ ನಟ್ಟ ಕನಕಯಷ್ಟಿಗಳ
ಮೇಗಣಡ್ಡವಣೆಗಳೊಳ್ ಕಣ್ಮು[3]ಚ್ಚಿ ಬೆಚ್ಚಿದಂತಿರ್ದುತೀರ್ದು[3]ಗೊಂಡು ಕೆ
ಲಕ್ಕೆಱಗುವ ಕುಕ್ಕುಟಂಗಳ ಕೋಕೆಕೆಂಕೆಯ ಕಡೆಯಂ ಪತ್ತಿ ಪೊತ್ತಿ
ಯುಂ, ಬಳ್ಳಿಮಾಡಂಗಳಳ್ಳಿಗಳೊಳ್ ಬಳ್ಳಿವರಿವ ಬಳ್ಳಿವಂದರ ಬಳ್ಳಿಗಳೊಳ್
ನಿಮಿರ್ದ ನಿಡುಗುಡಿಗಳಳ್ಳಿಱಿಯೆ ಪಾರ್ಶ್ವಪ್ರರೂಢಬಾಳರಸಾಳಸರ

---

ಪಾ— 1 ಕೋಳಾಹಳ. ಗ|| ಚ|| 2 ವಿಡಿ. ಜ|| 3 ಬೆಚ್ಚಿದಂತಿರ್ದಿರ್ದು. ಗ||

ಳಶಾಖಾಶಯನದಿನೆರ್ದು ಕರೆವ ಪರಭೃತಂಗಳ ಪಂಚಮದ ನುಣ್ಚರಮನು ಯ್ದು ಬಂಚಿದಿಂಚರದಂಚೆಯೊಳ್ ಪಳಂಚಿಯುಂ, ಸೂಳ್ಗೇಱಿಯ ಮುಂದಣ ಮತ್ತವಾರಣನ ಮೇಲೆ ಮೆಲ್ಲನೆ ಮರುಳ್ದು ಮಱೆದೊಱಗಿದೆಡ್ಡಮಿಂಡಿಯರ ಮೇಲುದಂ ಸೆಳೆದು ಕುಸಿದು ಕೆಲಕ್ಕೆ ಎೞೆದು ಜಕ್ಕುಗೊಂಡು ತಕ್ಕೆಗೆ ತೋರವಾದ ಪೇರುರದ ಮೊಲೆಗಳೊಳಪೊಕ್ಕು ಮುಂಡಾಡಿಯುಂ, ಸುರತಶ್ರಮಸುಷುಪ್ತಿಯಿಂ ಕಣ್ದೆಱೆಯಲಾಱದ ಪಾರಾವತಂಗಳ್ಗೆ ಸುಖಪ್ರಬೋಧಮಂ ಕಣ್ದೆಱೆಯಿಸುತ್ತುಮಱೆದೆಱೆದ ಗವಾಕ್ಷವಿವರದಿಂ ಸುರತಸೌಧಂಗಳೊಳಪೊಕ್ಕು ನಿಧುವನಪ್ರಥನದಿಂ ತಾಱುಂತಟ್ಟುಂ ಬಿರ್ದ ಕಾಮುಕಜನಕ್ಕೆ ಮುಡಿವಲರ ತೊಸೆದನುಲೇಪನದ ಸೊವಡು ಸವೆಮದನಱಿಯದಂತಿರೋಗರಗಂಪನೋಲಗಿಸಿಯುಂ, ಮದನಮೋಹನಮೂರ್ಛಾಸುಪ್ತಸೀಮಂತಿನೀವದನಮದಿರಾಮೋದಮಿಶ್ರನಿಶ್ವಾಸಶ್ವಸನನಸೋಂಕಿನಿಂ ಸೊರ್ಕಿ ತೂಗಿ ತೊನೆವಪ್ಪುವೆನಿಸಿಯುಂ, ಉರಿಯೊಳುರುಳ್ದು ಪುರಿಗಂತಿರಾದ ಪಸಂಗಳ ಪಿಂಗದ ಕಾಯ್ಪಿಂಗೆ ಕೊಕ್ಕರಿಸಿ [1]ಕಂಪಿಸಿ[1]ದಪ್ಪುವೆನಿಸಿಯುಂ, ನಂದುವ ಪದದೊಳ್ ನಿಂದಿರಲಳವಲ್ಲದೆ ತಡಪಡಿಸಿವಪ್ಪುವೆನಿಸಿಯುಂ, ದುರ್ಜನರಂತೆ ದಗ್ಧಗುಣಂಗಳುಂ, ಗಣಿಕಾಜನಂಗಳಂತೆ ವಿಗತಸ್ನೇಹಂಗಳುಂ, ವಿಪನ್ನಪಾರ್ಥಿವರಂತೆ ಅಪಚಿತಪ್ರಭಂಗಳುಂ, ಕಾಳಾಂತವರ್ತಿಗಳಂತೆ ಮಳಿನಮುಖಂಗಳುಂ, ದಾನಿಯ ಧನಂಗಳಂತೆ ಪಾತ್ರಮಾತ್ರಶೇಷಂಗಳುಮಾದ ಸೊಡರ್ಗುಡಿಗಳನಲ್ಲಾಡಿಯುಂ, ಸಹಜಲಜ್ಜಾರಸನಿಮಗ್ನೆಯರಪ್ಪ ಮುಗ್ಧೆಯರಂ ಬಱಿದೆ ನಾಣ್ಚಿಸದಿರೆಂದು ಬಾಯುಂ ಮುಚ್ಚುವಂತೆ ಸುರತವಿಚಿತ್ರವಯಸ್ಯವಚನ[2]ಶತ[2]ಮಂ ಪರಿವಿಡಿಗೆಯ್ವ ಪುರುಳಿಯರಗಿಳಿಯ ಚಂಚುಪುಟಮಂ ಪಳಂಚಿಯುಂ, ಎಸಳ್ ನಸುಗಂದೆ ಕಂಪು ಕಡುನಾಱೆ ಕೇಸರಂ ಕೆದಱಿ ಪೋಗೆ ಪೊಂಗಱಿದು ಮುಗ್ಧಮಧುಕರನಿಕರಕಳರವದಿಂ ಕಳೆಯಲಾಱದಳಲುರುಳಿವಡೆದಂತಿರ್ದ ಸಹಕಾರದ ಕುಸುಮಂಗಳನಾಶ್ವಾಸಿಸುವಂತೆ ಮೆಲ್ಲನೆ ಳವಿಯುಂ, ನಿತಂಬಭರಮನೆತ್ತಿಂಬಂತೆ ವಾಮಕರತಳಮಂ ಶಯ್ಯಾತಳದೊಳೂಱಿ ಬಲಗೈಯಂ ಬೞಲ್ದಿಡಗೈಯೊಳ್ ತೊಡರ್ಚಿ ಬಿಡುಮುಡಿಯಂ ಕೊಂ

---

ಪಾ— 1 ಕಂಪಿಸೆ. ಕ॥

ಕಿವ ಕೊರಲಿಂದಾಂಕಿ ಪೊಱಜವಾಱ ಪೊಱೞಿಗೆ[1]ವೋೞ[1]ಜಂಡಲನಾಗಿ ಕೊಂಡು
ಜೋಲ್ವ [2]ಕುಚ[2]ಭರಮನುರದೆಗೊಂಡು ನೆಗಪಲ್ ಪೋಪ ನಲ್ಲರಳಿಪಂ ತೋ
ಱ ತುಡುಕಿ ತೆಗೆಸಪೊಂಗಕ್ಕೆ ಪಂಗಾಗಿ ಸಡಗರದಿನೇೞ್ವ ಸೌಭಾಗ್ಯವತಿಯರ
ಱವಳಕದಿನಲ್ಲುಗುವ ಬಿರಿಮುಗುಳ್ ಪರಿಮಳಮನೆಪೆಸೂಱೆಗೊಳ್ವ ನಿಱಿ
ದುಂಬಿಗಳ ಗಱಿಯ ಗಾಳಿಯನುಱೆ ಸೆಱೆವಿಡಿದುಂ, ಸೋಂಕಿನ ಸೊಕದ
ಸೀತ್ಕಾರಮೆ ವೇದನಾಸೀತ್ಕಾರಮೆಂಬ ಸಂದೆಗಮನೀವ [3]ಪುರ[3]ಸೌಂದರಿಯರ
ಪಂದೆವೋಗದ ಮುದ್ದುಗೆಯ್ತಕ್ಕೆ ಮುಗುಳ್ನಗೆನಗುತುಮುಗುರೊತ್ತಿನೊಳ್
ಪತ್ತಿದ ತುದಿಗೂದಲನೂದಿಯೂದಿ ಬಿಡಿಸುವ ಕಾದಲರ ಸುಯ್ಯೆಲರ್ಗೆ
ಸಹಾಯನಾಗಿಯುಂ, ಅಳಿಮುಳಿಸಂ ಬಿದಿರ್ಚಿಯುಮಪ್ಪಿದಪ್ಪುಗಳನಮರ್ಚಿ
ಯುಂ, ಪಾಸಿನೊಳ್ ಪೊರಳ್ಚಿಯುಂ, ಪೋದ ಸವಿಯಂ ಮಗುೞ್ಚಿಯುಮಿ
ಲ್ಲಸಳವನೊಡರಿಸಿಯುಂ, ಕೂಟದ ತೋಟಿಯೊಳ್ ತೊಡರಿಸಿಯುಂ, ಅಗಲ್ದ
ಮನಮಂ ಮಣಿಯಿಸಿಯುಂ, ತಣ್ಪಿನೊಳ್ ತಣಿಯಿಸಿಯುಮಿಂತು ಸುಪ್ರ
ಭಾತಸಮೀರಣಂ ತೀಡುತ್ತಿರೆ; ॥೨೧॥

ಸ್ಫುರಿತಂ ತಾಮ್ರಾಧರೋಷ್ಠಂ ಸುಬದರವಳಿತಂ ದೀರ್ಘನೇತ್ರೋತ್ಪಳಂ ನಿ।
ಸ್ಸರದಲ್ಪಶ್ವಾಸರಮ್ಯಂ ಸ್ಮಿತವದನಸನೇಜಂ ನಿವರ್ತಶ್ಲಥಂ ಭಂ ॥
ಗುರಭಾಗೋದ್ಬದ್ಧಕೇಶಂ ಶ್ರಮಜಜಳಲುಳಿತಂ ರೋಮಭೇದಂ ಕರಂ ಸುಂ।
ದರಮಾದತ್ತಾಕುಮಾರಂ ಪರವಶನಿರೆ ನಿದ್ರಾಂಗನಾಸಂಗದಿಂದಂ ॥೨೨॥

ನೆರವಾಯ್ತು ಕೆತ್ತುವಂತಃ ।
ಕರಣಂ ಪ್ರಸ್ಪಂದಸುಭಗದಕ್ಷಿಣಭುಜಕಂ ॥
ದಿರೆ ವಾಮಪಾರ್ಶ್ವಶಯನದೊ ।
ಳರಸಂ ಕಾಣ್ಬಂತೆ ಯುವತಿನವದರ್ಶನಮಂ ॥ ॥೨೩॥

ಪಿರಿದುಂ ಕಣ್ಣಿಂ ಮುನ್ನಂ ।
ನೆರೆದುದು ತವಕದೊಳೆ ಚಿತ್ತವೆನೆ ಕನಸಿನೊಳಾ ॥
ದರಿಸಿ ಪದಿನಾಱುಬರಿಸದ ।
ಹರೆಯದ ಕನ್ನಿಕೆಯನವನಿಪಾಲಂ ಕಂಡಂ ॥ ॥೨೪॥

---

ಪಾ— 1 ಮಾ. ಚ॥ 2 ಕಚ. ಚ॥ 3 ಅರ. ಕ॥

ಆತರುಣಿ ತರಳಲೋಚನೆ ।
ಯಾತನ ಕಣ್ಬುರಿಗೆ ನಾಣ್ಚುಗಂತಿರೆ ನಿವ್ರಾ ॥
ಗೂಠಿ ತವೆ ಬಂದು ಮನವುಂ ।
ಚೇತೋಭವನಾಯೆಯಂತಿರಂದೊಳಪೊಕ್ಕಳ್ ॥ ॥೧೫॥

ಮತ್ತೆ ನಿಜಭಾವನಲ್ಲದೆ ।
ಮತ್ತಿನ ಭಾವಂಗಳುದಯಮಿಲ್ಲದ ಪದದೊಳ್ ॥
ಮತ್ತಗಜಗಮನೆ ರಮಣನ ।
ಚಿತ್ತಮನೊತ್ತರಿಸಿ ಬಂದು ಪುಗುತರ್ಪಾಗಳ್ ॥ ॥೧೬॥

ಉನ್ನತನಿತಂಬಭರದಿಂ ।
ಮುನ್ನುಂಡಲತಗೆಯು ರಾಗನುಂ ಕಾಱುವವೋಲ್ ॥
ಮುನ್ನಂ ಸೊಗಯಿಸಿದುವು ಮಿಗೆ ।
ಕನ್ನೆಯ ಕನದರುಣಚರಣಕೋಕನದಂಗಳ್ ॥ ॥೧೭॥

ನೆರವ್ರಳ್ಕೊಡೆ ನಡೆಯೊಳ್ ಮು ।
ಚ್ಚುರವುಳ್ಕೊಡೆ ಬರ್ಪುದೆಂದು ಬಾಲಮರಾಳೋ ॥
ತ್ಕರಮಂ ಬಯಲ್ಗೆ ಕರೆವಂ ।
ತಿರೆ ತರುಣಿಯು ಚರಣರಣಿತನೂಪುರಮೆಸೆಗುಂ ॥ ॥೧೮॥

ಮೃಗಲೋಚನೆಯೊಳ್ನುಡಿಗಳ ।
ನಗಲದೆ ನೋಡಿವರ ನಯನರುಚಿಗಳ್ ನುಣ್ಪಿಂ ॥
ಜಗಟ್ದ್ಧಿ* ಕೆಡೆದಿರ್ದವೆನೆ ಕಾ ।
ಲುಗು*ರ್ಗಳ ಕಿಱುವೆಳಗು ಕೆದಱಿ ಕರಮೆಸೆದಿರ್ಕುಂ ॥ ॥೧೯॥

ಕ್ರೀಡನಶೀಲಂ ಮದನಂ ।
ಮಾಡಿಸಿದಂ ನಿಜನಿಕೇತನೋಪಾಂತಿಕದೊಳ್ ॥
ಕ್ರೀಡಾದ್ರಿಯನೆನೆ ಚೆಲ್ವಂ ।
ನೀಡಿಪುದಾಘನನಿತಂಬೆಯಲಘುನಿತಂಬಂ ॥ ॥೨೦॥

ಸುದತಿಯ ತನುರುಚಿಜಲದೊಳ್ ।
ವದನಾಂಬುಜರೇಣುಪ್ರದಿ*ಪ್ತ ವಳಿವೀಚಿವಿಸರಂ ॥
ತವೆ ನೊರೆಗಟ್ಟಿತ್ತೆನೆ ಪ್ರೋಳ ।
ದುವು ಕಾಂಚನಕಾಂಚಿ ಜಘನಪುಳಿನಸ್ಥಳದೊಳ್ ॥ ॥ ೩೧॥

ಸ್ತನಮುನ್ನತಿಯುಂ ಜಘನದ ।
ತನಿವೆರ್ಚಂ ಮೊಡಿ ನೋಡಿ ಬಡವಾಯ್ತೆನೆ ಕಾ ॥
ಮಿನಿಯ ನಡುವೆಸೆದುದಲ್ಲಂ ।
ಘನಮೆನಿಸಿದ ನೆರೆಯ ಸಿರಿಗೆ ಸೈರಿಸಲಾರಂ ॥ ॥ ೩೨॥

ಶೈವಾಳಜಾಳವಲ್ಲರಿ ।
ಪೀವರಕುಚಕೋಕಮಿಥುನವೊಳೆದೊಂದೊಂದ ॥
ಕೇರ್ವಲ್ಲಿ *ಜಗುಳ್ದುದೆನೆ ರೋ ।
ಮಾವಳಿ ರಂಜಿಸಿದುದಾಸರೋಜಾನನೆಯಾ ॥ ॥ ೩೩॥

ಸ್ತನದ ನಿತಂಬದ ಬಿಣ್ಪಂ ।
ವನಜಭವಂ ತೂಗಿ ನೋಡೆ ನಡುವಂ ಪಿಡಿದಾ ॥
ತನ ಬೆರಲ ಪಜ್ಜೆ ಪತ್ತಿದು ।
ವೆನೆ ವಳಿಗಳ್ ಕಣ್ಗೆವಂದುವಾ ಕೋಮಳೆಯಾ ॥ ॥ ೩೪॥

ಚಿತ್ತಭವಚಕ್ರವರ್ತಿಗೆ ।
ತತ್ತರುಣಿಕು[1]ಚಕ್ರ[1]ಮೊಗೆಯೆ ದಿಗ್ವಿಜಯಕ್ಕೆಂ ॥
ದೆತ್ತಿದಮಳಪ್ರಹಾರದ ।
ಬಿತ್ತರಮಂ ಗೆಲ್ದುವನಳ ವೃತ್ತಕುಚಂಗಳ್ ॥ ॥ ೩೫॥

ಮದನನವಳಂಗದೊಳ್ ವಾ ।
ಣದೆ ತಿರಿತರುತುರುಳೆ ನಾಭಿಕೂಪದೊಳವನ ॥
ಭ್ಯುದಯಕ್ಕೆ ವದನವಿಧು ನೀ ।
ಡಿದ ಬಿಸಲತೆಯಂತೆ ಹಾರಲತೆ ಸೊಗಯಿಸುಗುಂ ॥ ॥೩೬॥

---

ಪಾ— 1 ಛತ್ರ. ಗ॥

'ಬೆಳದಿಂ'[1]ಗಳ ಕುಡಿವೆಳಗಿಂ ।
ನಳಿತೋಳಂ ಮಾತೆ ಧಾತ್ರನೊಸರ್ವ*ಮರ್ದಿ*ನೊಳ್ ॥
ಗ್ಗಳಿಸಿದ ಲಾವಣ್ಯರಸಂ ।
ಗಳ್ ಪನಿತಪ್ಪವೆನಿಸಿ ವನಿತೆಯುಗುರ್ವೆ*ಳಗೆಸೆಗುಂ ॥ ॥ ೩೭ ॥

[2]ಅಲರ್*ಮುಡಿಯೆತ್ತಿದ ಪಟಿಯಿಗೆ ।
ಮಲಗಿದ ಕಿವಿವಾಲೆಯೋಲೆ ಗಾಲಿಗಳೆನಲಾ ॥
ನಲಿನಾಕ್ಷಿಯ ಮುದ್ದುಮೊಗಂ ।
ಗೆಲೆವಂದುದು ಕುಸುಮಶರನ ಪೂವಿನ ರಥಮಂ[2] ॥ ॥ ೩೮ ॥

ಕಂದರ್ಪಂ ಪೊಳೆವಸುಕೆಯ ।
ಕೆಂದಳಿರಿಂ ಸಮೆದು ತನ್ನ ಕೈಪೊಡೆಯಂ ಪೂ ॥
ರ್ಣೇಂದುಗೆ ಕೈಯೆಡೆಯಂ ಕೊ ।
ಟ್ಟೆಂದದಿನಾ ಚಂದ್ರಮುಖಿಯ ಬಾಯ್ದೆಱೆಯೆಸೆಗುಂ ॥ ॥ ೩೯ ॥

ಪವಳದ ಬಟ್ಟಂ ನುಣ್ಪಿಡು ।
ಮಪ್ಪೊಲಾನನಲಕ್ಷ್ಮಿ ಮುತ್ತುಗಳ ಬೆಳಗಿಂದಾ ॥
ಯುವತಿಯ ಬಾಯ್ದೆಱೆಯೊಳ್ಪಿಂ ।
ಒಕುವ ಬೆಳಗಂ ದಶನಮಣಿಗಳೇಂ ತುಳ್ಕಿದುವೋ ॥ ॥ ೪೦ ॥

ಸ್ಮರನ ಬಿನದಕ್ಕೆ ಲೋಚನ ।
ಕರಿಗಳ್ ಕೈಯಿಕ್ಕಲೆಂದು ನಿಲೆ ಸಂಪಗೆಯಾ ॥
ಟ್ಟರಿಮುಗುಳ ತೊಳಪ ತಳಿಯೆನೆ ।
ಕರಮೆಸೆದುದು ಕಮಳಮುಖಿಯ ನಾಸಾಮುಕುಳಂ ॥ ॥ ೪೧ ॥

---

ಪಾ— 1 ಬೆಳುದಿಂ. ಕ॥ ಗ॥ 2 ಅಲರ್ಮುಡಿಯೆತ್ತಿದ ಪಟಿಯಿಗೆ । ಮಲಗಿದ ಕಿವಿಯೋಲೆ ಗಾಲಿ ನಳಿನಾಕ್ಷಿಮೊಗಂ॥ ಗೆಲೆವಂದುದು ಕುಸುಮಾಸ್ತ್ರನ ವಿಲಸಿತಮೆನಿಸಿರ್ದ ಪುಷ್ಪರಥದುನ್ನತಿಯಂ. ಚ॥

ಬಂದೊಂದಱ ಸೌಂದರ್ಯಮ ।
ನೊಂದೊಂದೀಕ್ಷಿಸಲೆ ಬಯಸಿ ನಾಸಿಕೆಯಡ್ಡಂ ॥
ಬಂದಿರೆ ಪೊಱವಳಸಿಂದಂ ।
ಬಂದ ಪ್ರವೆನೆ ನಿಮಿ*ರ್ದವಳ ನಿಡಿಯಲಗ*ಣ್ಗಳ್ ॥ ॥೪೨॥

ತರುಣಿಯ ಮುಖಚಂದ್ರಮನೊಳ್ ।
ಪರಿಣನುಮಂ ಬಱಯುತೆಂದು ಭಾವಿಸಿ ಪಿಡಿ ಸುಂ ॥
ಪರತೆಗೆ ಮರುಳ್ದು [1]ಬಱಿ[1]ಗೊಂ ।
ಪೆರಡನೆ ಬರೆವಂತಿರಸಿಯ ಪುರ್ಬುಗಳೆಸೆಗುಂ ॥ ॥೪೩॥

ಇಂಬಾದುದವಳ ಧವಳಚ ।
ಳಾಂಬಕವಿಷಮಾಂಬಕಂ ಕರಂ ಕೊಂಕಿದ ಪು ॥
ರ್ಬಂಬ ಜಪೆಯಲ್ಲಿ ತೊಳಗೆ ತು।
ಱುಂಬಿದ ಪೆಱೆಯಂತೆ ಪೆಱೆನೊಸಲ್ ಬಾಲಕಿಯಾ ॥ ॥೪೪॥

ಕೆಳೆಗೊಳಲೆಂದನುನಯದಿಂ ।
ದೆಳವೆಱೆಯೊಡನಾಡುತಿರ್ಪ ಮಱಿಗಟ್ಟಲೆಗ ॥
ಳೆಗ್ಗಳಗಾದ ಚೆಲ್ವನೊಲಿಸಿದು ।
ವಳಿಕುಳಕುಂತಳೆಯ ನೊಸಲೊಳಲೆವಳಕಂಗಳ್ ॥ ॥೪೫॥

ತಳರದೆ ನಪೆ ನೋಡಲೊಡಂ ।
ಬಳೆಯಿಸಿ ಮೋಹನಮನಸಿತಸರ್ಪನ ಮದವುಂ ॥
ಗಳಯಿಸಿದ ಲತಾಂಗಿಯ ಮುಡಿ ।
ಯೆಳಲತೆಯೊಳ್ ಸೋಗೆ ಪಾಯ್ದವೊಲ್ ಸೊಗಯಿಸುಗುಂ ॥ ॥೪೬॥

ಈರುವಿಟ್ಟಂ ಕಾಮದೇವಂ ರತಿಯತಿಶಯದಿಂ ಬಣ್ಣವಿಟ್ಟಳ್ ಬಸಂತಂ ।
ಬರೆದಂ [2]ಸರ್ವಾಂಗಮಂ[2] ಕಣ್ದೆಱೆದನೊಸೆದು ಶೀತಾಂಶು ಚೈತ್ರಾನಿಳಂ ತೀ ॥
ವಿರೆ ಜೀವಂಬೊಯ್ದನಂತಲ್ಲದೊಡೆ ಸೊಗಯಿಪೀರೂಪಮೀಬಣ್ಣಮೀಮೆ ।
ಯ್ಸಿರಿಯೀಕಟ್ಟಿಲ್ಲಮೀಭಾವಕಮೊಗೆಯದೆನಲ್ಕಾಂತೆ ಕಣ್ಗಿಷ್ಟಮಾದಳ್ ॥೪೭॥

ಪಾ— 1 ಬಱಿ. ಚ॥ 2 ಸರ್ವಸ್ವದಿಂ. ಗ॥, ಸರ್ವಸ್ವಮಂ. ಕ॥ ಚ॥

ಮನಮಂ ಸೋಲಿಸಲಂಗಜಂ ಬಯಸಿ ಕಾಂತಾರೂಪದೊಳ್ತಳ್ತ ಮೋ।
ಹನಮೋ [1]ಸುಪ್ರತಿಯಾಗಿ[1] ಪೆತ್ತನೊ ವಸಂತಂ ಪೆಣ್ಣರೂಪಂ ಗಿರೀ॥
ಶನನಾರಾಧಿಸಿ ಮೋಕ್ಷ ವರಂಬಡೆದನೋ ಪೆಣ್ಗಾಡಿಯುಂ ಚಂದ್ರನೇಂ।
ನನೆಯಂಬಾಂತುವೊ ನೋಂತು ಪೆಣ್ಬರಿಜ[2]ನೆಂ[2]ಬಂತಾಕೆ ಕಣ್ಗೊಪ್ಪಿದಳ್॥

ಬೆಳತಿಗೆಗಣ್ಗೆ ನೋಂತ ಲತೆಯೋಲಲಿತಾಂಗಿಯೊ ಮುದ್ದುಗೆ[3]ಯ್ದ[3]ಮೊ।
ಳ್ದೆಳಸಿದ ಪೊನ್ನ ಪುತ್ತಳಿಯೊ ಕಾಂತೆ[4]ಯೊ[4] ಪೂವುಡಿಬಿಟ್ಟ ಬೆನ್ನನ॥
ಪ್ಪಳಸುವ ಸೈಪಿನಬ್ಜಿನಿಯೊ ಕಾಮಿನಿಯೋ ಮೊಲೆ[5]ವೊ[5]ತ್ತ ಭಾಗ್ಯಮಂ।
ತಳೆದೆಳಮಿಂಚೊ ಕೋಮಳೆಯೊ ಪೇೞೆನೆ ಬಾಳಕಿಯಾದಮೊಪ್ಪಿದಳ್॥

ವ॥ ಆಕೋಮಳೆ [6]ವಿಕ[6]ಸಿತಕಮಳಲೋಚನೆಯಾಗಿಯುಂ ಚಂದ್ರಾನನೆಯುಂ, ಕರ್ಣವಿಶ್ರಾಂತವಿಶಾಲಾಪಾಂಗೆಯಾಗಿಯುಮತನುವಿಜಯಪತಾಕೆಯುಂ, ಅಳಿಕಳಭಕುಳಕಾಂತಕುಂತಳೆಯಾಗಿಯುಂ ಚಂಪಕಮುಕುಳಕಮನೀಯನಾಸಿಕೆಯುಂ, ಅಲೆವ ಲಾವಣ್ಯರಸರಾಶಿಯಾಗಿಯುಂ ನಿರವಧಿಮಾಧುರ್ಯನಿಧಿಯುಂ, ಸಮ[7]ರಾ[7]ಳಸುಭಗಭ್ರೂಲತೆಯಾಗಿಯುಮುತ್ತುಂಗಪಯೋಧರೆಯುಮೆನಿಸಿದಳಂತುಮಲ್ಲದೆಯುಂ; ವನಲಕ್ಷ್ಮಿಯಂತೆ ಮೃದುಲತಾಳಂಕಾರೆಯುಂ, ನಾಕವನ[8]ಲೇಖೆ ಯಂತಿರವಗಾಢಸರೋಮರಾಜಿಸುಂದರಮಧ್ಯೆಯುಂ, ಶೈಲಸುತೆಯಂತೆ ಸುವಿಕಾಶ[9]ಕೇಶ[9]ಹಸ್ತಚುಂಬಿತನಿತಂಬೆಯುಂ, ಸೌಂದರ್ಯಶ್ರೀಯಂತೆ ಸುಲಲಿತಗುಣಬಾಹುಲತೆಯುಂ, ಉದಧಿವೇಲೆಯಂತಿರಧರಪ್ರವಾಳವಿಳಸಿತೆಯುಂ, ಸಿರಿಯಂತೆ ಸುರಭಿಸರೋಜವಾಸೆಯುಂ, ಸರಸ್ವತಿಯಂತೆ ಕಳಹಂಸಯಾನೆಯುಂ, ಪುಣ್ಯಲಕ್ಷ್ಮಿಯಂತಿರದೃಷ್ಟಪೂರ್ವೆಯುಂ, ವಿಭಾತವೇಳೆಯಂತೆ ಶುಭಸ್ವಪ್ನದರ್ಶಿತಫಲೆಯುಂ, ಪುಷ್ಪಚಾಪಂಗೆ ಚಾಪಾಗಮಾಶ್ರಯಭೂಮಿಯುಂ, ಸ್ಮರಸಾಧಕಂಗೆ ಶೃಂಗಾರನಿಧಾನದೀಪವರ್ತಿಕೆಯುಂ, ಮಕರಧ್ವಜಸಿದ್ಧಂಗೆ ವಶೀಕರಣಮಂತ್ರಸಿದ್ಧಿಯುಂ, ಮದನಮಾತಂಗಕ್ಕೆ ಮದಲಕ್ಷ್ಮಿಯುಂ, ಮಾರಮಾಂತ್ರಿಕನ ಮಾ

---

ಪಾ— 1 ಪೇೞಿನಲೊಲ್ದು. ಗ॥ ಸುಭ್ರುವಿಯಾಗಿ ಕ॥ ಚ॥ 2 ವೆ. ಚ॥ 3 ಯ್ದು. ಚ॥ 4 ಯು. ಗ॥ 5 ವೆ. ಕ॥ ಗ॥ 6 ವಿಳೆ. ಗ॥ 7 ವಾ. ಕ॥; ದಾ. ಗ॥ 8 ಲತೆ. ಚ॥ 9 ಚ॥ ಪ್ರತಿಯಲ್ಲಿಲ್ಲ.

ರಣಯಂತ್ರಲೇಖೆಯುಂ, ಮಧುಮಿತ್ರವಿಧಾತ್ರನ ಭುವನವಿಲೋಚನ[1]ಸೃ[1]ಷ್ಟಿಯುಂ, ಚಿತ್ತಭಿತ್ತಿಗೆ ಚಿತ್ರಲೇಖೆಯುಂ, ಮನಕ್ಕೆ ಮೋಹನಶಕ್ತಿಯುಂ, ಲೋಚನಲೋಪಕ್ಕೆಯಸ್ಕಾಂತಪ್ರತಿಕೆಯುಂ, ಇಂದ್ರಿಯಮೃಗಕ್ಕೆ ಮರುಮರೀಚಿಕೆಯುಂ, ಸೊಕ್ಕಿನಿಕ್ಕೆದಾಣನುಂ, ಪ್ರಸಾದದೇಸೆಯ [2]ಬಿ[2]ಕ್ಕಲುಂ, ಕೌತುಕದ ಕಣಿ[3]ಯುಂ, ಕಾಮನ ಚಿಂತಾಮಣಿಯುಂ, ಯೌವನದ ಜೊತ್ತುಂ, ಬೆಡಂಗಿನ ಬಿತ್ತುಂ, ಚೆಲ್ವಿನ ಚಿತ್ತಮುಂ, ವಿಳಾಸದ ವಿತ್ತಮುಂ, ಕಂತುಕೀರ್ತಿಕುಸುಮದ ಕಂಪುಂ, ಸುರತಸುಖದಿಂಪುಂ, ರಾಗಲತೆಯ ಕುಡಿಯುಂ, ಕಾಂತಿಯಂಕುರದ [5]ಮು[5]ಡಿಯುಮೆನಿಸಿದ [4]ಸರ್ವೈ[4]ಶ್ವರ್ಯರೂಪಾತಿಶಯಮಂ ಮನಮ ಕಣ್ಗಳಾಗೆ ಕಂದರ್ಪದೇವಕುಮಾರನತಿಕೌತುಕದಿಂ ನೀಡುಂ ಭಾವಿಸಿ ನೋಡುತ್ತಿರ್ಪುದುಂ; ॥೫೦॥

ಸುದತೀಸಸ್ಮೇರವಕ್ತ್ರೇಂದುವನಿದೆ ಮಱಿಗೊಂಡೆಚ್ಚಪಂ ಕಾಮನಂತ|
ಲ್ಲದೊಡೇಕೀಭ್ರೂಲತಾಚಾಪದ ತನಿಮಿಡುಕೇಕೀಚಳತ್ಪಕ್ಷ್ಮಮಾಳಾ ॥
ಮದಭೃಂಗಶ್ರೇಣಿಮೌರ್ವೀಸ್ಫುರಣೆಮುಸುಱಿಮೇಲೇಕೆಪಾಯ್ದಪ್ಪುವೀಸ|
ನ್ಮದಸಾಹಂಕಾರಸಾರೋತ್ಪಳಚಳದಳದೀರ್ಘಾಕ್ಷಿಬಾಣಪ್ರಪಾತಂ ॥

ಎಂಬಿನಮಾತನನಾದಳಿ |
ತಾಂಬುಜಮುಖಿ ಸೋಲ್ತ ಭಾವಮಂ ಬೀಱುವ ನೇ ॥
ತ್ರಾಂಬುಜದಿಂ [6]ಮೋದಿ[6]ದಳೇ |
ನೆಂಬೆನೊ ಬಿನದಮನಪೂರ್ವಮಂ ಪದ್ಮಜನಾ ॥ ॥೫೧॥

ವ॥ ಆಪ್ರಸ್ತಾವದೊಳ್

ತನಗೆ ಸೊಬಗಿಂಪಮಾತಂ |
ಮನದೊಳ್ ಮಚ್ಚರಿಪನೆಂಬ [7]ಸೂಳ್ವಗೆ[7] ಬಗೆಯೊಳ್ ॥
ನನೆಕೊನೆವ್ರೋದಂತಿರೆ ನಿಡು |
ನನೆಗಣೆಗಳನಾಯ್ದು ಕೊಂಡು ಮನಸಿಜನೆಚ್ಚಂ ॥ ॥೫೨॥

---

ಪಾ— 1 ದೃ. ಚ॥ 2 ಪೊ. ಕ॥ 3 ಕು. ಚ॥ 4 ಗರ್ವೈ. ಗ॥; ಘನ್ಯೈ. ಚ॥ 5 ಸಾರಂ. ಚ॥ 6 ನೋಡಿ. ಗ॥ 7 ಪಳಿವಗೆ. ಕ॥; ಹಳಿವಗೆ. ಗ॥ ಚ॥

ಮಱೆದಿರೆಯುಮಿಂದ್ರಿಯಂಗಳ್ ।
ಗುಱಿಯಾದುದು ನೃಪನ ಚಿತ್ತಮಲರ್*ಗಣೆಗೇಂ ಮ ॥
ಯ್ಯುಱಿವಖಿಳಕರಣಮುಮಂ ಕ ।
ಣ್ದೆಱೆದವರಂ ಕೊಂದು ಕೂಗದಿರ್ಪನೆ ಮದನಂ ॥ ॥೫೪॥

ನಿಡುಸುಯ್ ಸುಯ್ಯೊಳ್ ಹೃದಯದ ।
ನಡುಕಂ ಮಿಡುಕಿನೊಳಪೂರ್ವಘರ್ಮಜಳಂಗಳ್ ॥
ಬಿಡುಬೆಮರ್*ನಿಗಳೊಳಾ[1]ತೊಂ ।
ಕಡಿ[1]ನೊಳ್ ಪರವಶತೆ ಬೆರಸಿತರಸನೊಳಾಗಳ್ ॥ ॥೫೫॥

ವ॥ ಅಂತುಮಲ್ಲದೆಯುಂ

ನನೆಗೋಲ್ ನಟ್ಟುಕೊನರ್ತ್ತವೋಲ್ಪುಳಕಮುಣ್ಮಿತ್ತಲ್ಲಿರಕ್ತಾಂಬುಗಳ್।
ಪನಿವಂ[2]ತೆ[2]ದುರ್ವು ಘರ್ಮವಾರಿ ದಿಟದಿಂ ಹೃದ್ಗೇಹದಂ ತನ್ನಿತಂ ॥
ಬಿನಿ ಪೊಕ್ಕಂತಿರೆ ಕಂಪನಕ್ಕೆ ತನು ಕೈಗೊಟ್ಟತ್ತು ಧೀರತ್ವಮಂ ।
ಮನದಿಂ ಸುಯ್ ಪೊಱಗಿಕ್ಕೆ ಪೊತ್ತಡಕುವಂತಿರ್ದತ್ತು ಭೂಪಾಳನಾ॥೫೬॥

ಕನಸಿನೊಳಗಾಕುಮಾರಂ ।
ವನಿತೆಗೆ ಬಸಮಾಗಿ ಬಹುವಿಕಾರಮನಾಂತಂ ॥
ಮನಮನೆ [3]ನೆಲೆವನೆಮಾಡಿ ।
ರ್ಪ[3]ನಂಗನಂ ಕೞೆಯಲಾರ್ಗಮೇಂ ಬಂದಪ್ಪುದೇ ॥ ॥೫೭॥

ಬನದೊಳ್ ಪುಟ್ಟಿಯುಮನಲಂ ।
ಮನದೊಳ್ ಪುಟ್ಟಿಯುಮನಂಗನುರಿಪಿದನಾತಂ ॥
ಬನಮುನಿವಂ ಮನಮುನೆನ ।
ಲ್ಕನಲಂಗಂ ಮನಸಿಜಂಗಮಾವುದೊ ಭೇದಂ ॥ ॥೫೮॥

ವ॥ ಅಂತುಮಲ್ಲದೆಯುಂ,

ಬಗೆಯೊಳಪೊಕ್ಕ ಕೋಮಳೆಯನೀಕ್ಷಿಸುವಂತೆ ಬಱಿಲ್ದ ಕಣ್ಮಲರ್ ।
ಮುಗಿದಿರೆ ಚುಂಬನಕ್ಕೆಳಸುವಂತಧರಂ ತನಿಗೆತ್ತೆ ಪೂವಿನಂ ॥

---

ಪಾ— 1 ತೊಂಕುಡಿ. ಚ॥ 2 ತಿ. ಕ॥ ಚ॥ 3 ನೆಲೆಮಾಡಿರ್ಪೆಯು. ಚ॥

ಬುಗಳುಗಿನಂತೆ ಪಾಯ್ದಿರ್ದ* ಕರಂ [1]ಮಿಸುಗು[1]ತ್ತಿರೆ ಸುಯ್ಗುಳುತ್ತೆ ಮು।
ಚ್ಚೆಗೆ ನೆಱೆದಂತೆ ಮೆಯ್ಮಱೆದು ನಿದ್ರೆಯೊಳೊಪ್ಪಿದನಾಕುಮಾರಕಂ ॥

ವ॥ ಆಗಳಾಕೆಯ ಕಣ್ಬೆಳಗೆಂಬ ಕಾಸುಪಾಶದಿಂ ಕಟ್ಟಿ [2]ತೆಗೆ[2]ದಂತೆಯುಂ, ಮದನವಹನಂ ಪತ್ತಿ ನಿತ್ತರಿಸಲಾಱದೆ ಲಲನೆಯ ಲಾವಣ್ಯರಸದ ಬಯಲ್ವೊನಲೊಳೋಲಾಡಿ ಬಿೞ್ದಂತೆಯುಂ, ಕುಸುಮಶರನ ಕೂರ್ಗಣೆಗೆ ತನ್ನನೆ ಗುಱಿಯೊಡ್ಡಿದುದರ್ಕೆ ಬೆಗಡುಗೊಂಡಂತೆಯುಂ, ಬಿೞ್ಕುಪ್ರೋಗಿ ಬಗಿದು ಪುಗುವಂತೆಯುಂ, ಸೋಲ್ತು ತನ್ನನೊಪ್ಪಿಸುವಂತೆಯುಮಪ್ಪಿಕೊಳ್ವಂತೆಯುಮೆಳಸಿ ಬಳಸಿ ಪರಿದು ಪತ್ತಿ ಬೞಲ್ದು ಬೆಂಡಾಗಿ ನಾಭಿಕೂಪದೊಳ್ ಬಿರ್ದಂತೆಯುಂ, ಬಟ್ಟವೊಲೆವೆಟ್ಟದನಿೞಿಯಲಱಿಯದಂತೆಯುಂ, ಮುಖಚಂದ್ರಮರೀಚಿಯೊಳ್ ಮುೞುಗಿದಂತೆಯುಂ, ಕೇಶಪಾಶದೊಳ್ತೊಡರ್ದಂತೆಯುಮೆಂತುಮತ್ಯಾಸಕ್ತಿಯಿಂ ತಳರಲೊಲ್ಲದ ತಳೋದರಿಯನಯಮರೀಚಿನಜ್ರಲೇಪದೊಳ್ ತೊಡರ್ದ ಚಪಳಚಿತ್ತಮುಂ ತೆಗೆಯಲಾಱದುಚ್ಚಮುಂ ತುಚ್ಚಮುಮಲ್ಲದಿಚ್ಚೆಯೆಚ್ಚಱಿಸೆಯೆಚ್ಚಱಲುಂ ಮಱೆವಂತೆ ನಿದ್ರಾಮುದ್ರಿತವಿಳೋಚನನುಮಾಗಿ ಕಂದರ್ಪದೇವನಿರ್ದಪುದುನ್ನಗಂ; ದುರ್ವಾರದರ್ಪನಪ್ಪ ದರ್ಪಕನ ಭುಜವಿಜಯಪ್ರಕಟಪಟುಪಟಹರಟನಾಟೋಪಮನಭಿನಯಿಸುವಂತೆ ॥೬೦॥

ಚಂಡಾಳೀಚಂಡಗೀತಧ್ವನಿಯನೊ[3]ದೆ[3]ದು ಪಾರಾವತಾರಾವಮಂ ಬೆಂ।
ಕೊಂಡೋಕಃಕೀರಕೋಳಾಹಳಮನಲೆದು ಸೆಜ್ಜಾರದಿಂದೇೞ್ವಿ ಮಾದ್ಯ ॥
ಚ್ಚುಂಡಾಳೋಚ್ಛೃಂಖಳಾಶಿಂಜಿತವನಿಡೆಗೆಪ್ಪೊಯ್ದುಣ್ಮೆ ಪ್ರೋಣ್ಮುತ್ತದಂತಾ ।
ಜಾಂಡಂ ಪ್ರಾತಸ್ತ್ಯಶಂಖಸ್ವನಸಹಚರಸಂಚಾರ್ಯತೂರ್ಯಪ್ರಣಾದಂ ॥

ಆನಿನವದಿನೆಚ್ಚತ್ತನೆ ।
ಭೂನಾಥಂ ಮೂಣದಿರ್ದ*ಯನುಚರ್ಚಾವ ಮದನಾ ॥
ಸ್ತ್ರಾನಿಕದಿನೆಚ್ಚತ್ತಂ ।
ತಾನೆನೆ ಮೈ ಮಱೆದು ನಿದ್ರೆಯಿಂದೆಚ್ಚತ್ತಂ ॥ ॥೬೧॥

---

ಪಾ— 1 ಮುಸುಕು. ಗ॥ 2 ಚ॥ ಪ್ರತಿಯಲ್ಲಿಲ್ಲ 3 ನೆ; ಗೆ. ಗ॥

ಅರಸಂ ಸರಸಿಜಮುಖಿಗಾಂ ।
ನೆರೆದಿರೆಯುಂ ಸೋಲ್ತನೆಂದು ಪುರುಡಿಸಿ ಪೋಪಂ ॥
ತಿರೆ ನಿದ್ರೆ ಪೋದುದವನೀ ।
ಶ್ವರನುಂ ಸಂಭ್ರಮದಿನೆರ್ದು ತಳೆವೆಳಗಾದಂ ॥ ॥ ೬೩॥

ವ॥ ಆಸಮಯದೊಳ್

ಅಳಿನೀಜ್ಯಾಮೃದುಮಂಜುಶಿಂಜಿತಸಮಂ ಸಣ್ಣಿಂಚರಂ ಬಂಚರ ।
ದ್ದಳಿಯೊಳ್ತಳ್ತೊಡನುಣ್ಮೆನುಣ್ಪುರದೆ ಮಿಂಚಂ [1]ಸೀಟ್ಟಿ[1]ಪ್ರೋಲ್ಪೊಣ್ಮೆ ಕಾ॥
ಕಳಿಯೊಳ್ಕೂಡಿದ ಸೀಯನಪ್ಪ ರಸಗೇಯಂ ಚಿತ್ತಮಂ ತಾಗೆ ಪೂ ।
ಗಳ ಬಾಣಂಗಳ್ ತಾಗಿದಂತಿರಗಿದಂ ಶೃಂಗಾರಕಾರಾಗೃಹಂ ॥ ॥೬೮॥

ವ॥ ಅಂತು ಶಯ್ಯಾತಳದಿನೆರ್ದು ನೀಳ್ದ ಬಿಳಿಯ ನಳಿನದೆಸಳೊಳ್ ಮುಸುಱಿ ಮುತ್ತಿದ ಮತ್ತಮಧುಕರಕುಳಮಂ ಕೆಲಕ್ಕೆ ತೊಲಗಿಸುವಂತೆ ತಳ್ತುತುಱುಗೆಮೆಗಣ್ಣಳಂ ತೆಗೆದು, ನೆಯ್ದಿಲೊಳ್ ನಿಂದ ತುಷಾರ[2]ಕಳಿಕೆ[2]ಗಳಂಕೆಂದಳಿರಿಂ ತೊಡೆವಂತೆ ಕೆಂದಳದಿಂ [3]ಕಣ್ಬನಿಗಳ[3]ನಗಲೆ ನೂಂಕಿ, ಕೊಲಲೆಂದು ಕೊರ್ವಿದ ಕಠಿನಕುಚಕುಂಭಮುರಮನುರ್ಚಿ ಬೆಂಗೆ ಬಳೆವಂತಿರೆ ಕಂಡು ಮೇಲೆವರಿದಪ್ಪಳೆಂಬ ತಪ್ಪಿಂಗೆ ಮುಂದೆನಿಂದಂತಿರ್ದ ಕೋಮಳೆಯ ರೂಪಂ ಕುಮುಗದಳದೀರ್ಘದಾಮದಿಂ [4]ಮೋದು[4]ವಂತೆಯುಂ, ಪಟಿಪೂವಲಿ ಕಱಿದು ಕಂದಿ ನಾಱುಮವೆಂದು ನನಕುಸುಮೋಪಹಾರಮಂ ಕೆದಱುವಂತೆಯುಂ ಸೊಡರ್ಗುಡಿಗಳಂ ನಿಮಿರ್ದ ಕಾಡಿಗೆಗುಡಿಗಳ ನುಣ್ಗಪ್ಪಿನಿಂ ನಸುಮಾಸಿದುವೆಂದು ಸೌಧಭಿತ್ತಿಗಳಂ ಸೊದೆವಳವಂತೆಯುಂ, ಕಣ್ಬೆಳಗು ಬಳಸೆ ವಿಳೋಚನಂ ವಿಸ್ಫುರಿತವಿಲೋಚನನಾಗಿ ಕಾಮಮಾಯೆಯಿಂ ಮೆಯ್ಮಱೆದು ಮೋಹಗ್ರಹದ ಸೋಂಕಿನಿಂ ಮರುಳ್ಗೊಂಡು ಸೋಲದ ಸೊರ್ಕು ತಿಳಿಯದೆ ಕಳವಳಿಸಿ ನೋಡಿ, ॥ ೬೫॥

ತಳರದೆ ತನ್ನ ಕಣ್ಣ ಮೊಗಲೊಳ್ ಸುಱಿದಾಕೆಯ [5]ಕಣ್ ತಳ ।
ತ್ತಳ್[5]ಸಿದೊಡಾಕೆಗೆತ್ತು ರಸ[6]ಭಾವದ ಚಿತ್ರಮ[6]ನಾಕೆಗೆತ್ತು ಪು ॥

ಪಾ— 1 ಪೀಳ್ಪ ಚ॥ 2 ಕಣಿಕೆ. ಚ॥ 3 ಕಣ್ಣಪೀರ್ಗಳ ಗ॥
4 ನೋಡು. ಕ॥ ಗ॥ 5 ರೂಪುತಳ್ತ ಳ. ಚ॥ 6 ಚಿತ್ರದಪೆಂಡಿರ. ಗ॥

ತ್ತ ಱಿಗಳನಾಕೆಗೆತ್ತೆಲೆಗೆ ಬಾಯೆನುತುಂ ನಿತುದೋಳನೆತ್ತಿ ಕೋ ।
ವುಳೆಕರಕಂಜದಿಂದೆಳವಿ ನೋಡಿದನಾರತಿರಾಗದೋವಳಂ ॥ ॥೬೬॥

ವ॥ ಅಲ್ಲಿಂಬಱಯಿಂ,

ಅಂಗಂಗಳೊಳು ಱಿದಳೊ ಕರ ।
ಣಂಗಳ್ ತವೊಳಗೆ ಪಚ್ಚುಗೊಂಡುವೊ ಚಿತ್ತಂ ॥
ನುಂಗಿದುದೊ ಪೇಚಿನಲ್ಕಾ ।
ಗಂಗನೆಯುಂ ಕಾಣದರಸನಿದು ಕನಸೆಂದಂ ॥ ॥೬೭॥

ವ॥ ಅಂತು ಕನಸೆಂದಱಿದಾನಿವಾಸವನುಣಿಭಿತ್ತಿಭಾಗದೊಳ್

ಬರೆದ ಸಜೀವಚಿತ್ರವುವುನೀಕ್ಷಿಸಿ 'ನಾಣ್ಚಿ' ಮುಖಾಂಬುಜಾತವುಂ ।
ತಿರಿಪಿದನಾತ್ಮಬಿಂಬತತಿಗಂ ತಲೆಗುತ್ತಿ ಬೆಗಬ್ಬಿ ಕಣ್ಗಳಂ ॥
ಬರೆ ತೆಗೆದಂ ನೃಪಂ ತನಗೆ ತಾಂ ಗಡ ಲಜ್ಜಿಸಿ ಘರ್ಮವಾರಿಯುಂ ।
ಸುರಿದನವಂತೆ ದಲ್ ಮತಿವಿಮೋಹಮೆ ಮಾನಿಗೆ ಲಜ್ಜೆಯಲ್ಲವೇ ॥೬೮॥

ಬೆದಱಿದ ಮನವುಂ ಸಂತೈ ।
ಸಿವನೊಯ್ಯನೆ ವಿಕಳಮಾದ ಸಕಳೇಂದ್ರಿಯವುಂ ॥
ಪದುಳಿಸಿದಂ ಪಾಡಱಿದ ।
ಳ್ಕದ ತನ್ನನೆ ತಾನೆ ಪೊಸತುವೊಬ್ಬಿಪ್ರೋಲರಸಂ ॥ ॥೬೯॥

ವ॥ ಅಂತು ಸಂತೈಸಿಯುಂ ಸಂತಮಿರದೆ ಮುನ್ನಮೆಂದುಮನುಭವಿಸಿ ಯಱಿಯದ ಸುಂದರಿಯ ಸೌಂದರ್ಯದ ಸವಿಯೆ ಸೀಧು'ವಾ'ದಂತೆಯುಂ ಲಾವಣ್ಯವತಿಯ ಲಾವಣ್ಯರಸದ ನವಾಸ್ವಾದನಂ ನಾಲಗೆಯಂ ಪತ್ತಿದಂತೆಯುಂ ಧೃತಿಯೆಂಬ ಪ್ರೌಢರ್ಪ ಪಱಿದು ಪೋದುದೆನ್ನ ನಿನ್ನಾರ್ಪಡಿವರೆಂದು ಪೊಡರ್ಪುಗೆಯ್ವಂತೆಯುಂ ಪಿಡಿಯೆ ಪಿಡಿಯೆ ಮುಂದುರುಳಿ ಮಿಱು ಪರಿವ ಮನವುಂ ನಿಲಿಸಲಾಱದೆ ॥ ॥೭೦॥

ಸುಯ್ಯುತ್ತುಂ ಮತ್ತೆ ಶಯ್ಯಾತಳದೊಳಸವಸಂ ಮೆಯ್ಯನೀಡಾಡಿದೈರ್ಯ।
ಕ್ಕುಯ್ಯುತ್ತುಂಚಿತ್ತಮುಂವಿಸ್ಮಯಮುಯರಸದಿಂ ನಾನುತುಂಸೆಜ್ಜೆಗೊಟ್ಟಂ।

ಪಾ— 1 ೪. ಗ॥ 2 ಕಾಣ್ಬ. ಗ॥ 3 ಸಿಂಧುವೋ. ಚ॥ ಗ॥

ಗಯ್ಯಂ ಗಲ್ಲಕ್ಕೆ ಪೇಱುಂತಿರೆ ಬೞಿದೆ ಬೞಲ್ದಿನ್ನರಾರೆಂದು ತನ್ನಂ ।
ಬಯ್ಯುತ್ತುಂ ಕಾಮನುಚ್ಛೃಂಖಳತೆಗೆ ತಲೆಯುಂ ತೂಗಿದಂ ರಾಜಪುತ್ರಂ ॥

ವ॥ ಅಂತು ತೂಗಿ ತನ್ನೊಳಿಂತೆಂದಂ.—

ಇದು ಕನಸಾಗಿಯುಂ ಕನಸಿನಂದಮುಮಲ್ತಿದು ಕಣ್ಗೆ ಕಾಂತೆಯು ।
ಲ್ಲದೆ ಪೆಱತಾವುದುಂ ಪೊಳೆಯದೆನ್ನಯ ಚಿತ್ತದೊಳಿನ್ನುಮಾಕೆಯು ॥
ಲ್ಲದೆ ಪೆಱತಾವುದುಂ ಪುಗದು ನನ್ನಿ*ರ್ದೆಯುಂ ಗುಱಿಮಾಡಿದೇಸನ ।
ಲ್ಲದೆ ಪೆಱತಾವುದಂ ಬವಸೆಗಾಣವು ಕಾಮನ ಹಸ್ತಶಾಖೆಗಳ್ ॥ ೭೦॥

ವ॥ ಅದಲ್ಲದೆಯುಂ,

ಕಡೆಗಣ್ಣಿಂ ಸೋಲಮಂ ಸೂಸುವ ಸತಿಯಸಿತಸ್ನಿಗ್ಧದೃಗ್ಭಾವದಿಂ ಪೊ
ಯ್ವಡೆದೆನ್ನೀಚಿತ್ತಮಿನ್ನುಂ ಬೆದಱುವುದು ನಟ್ಟಾಲಿಗೊಂಡಪ್ಪವಿನ್ನುಂ ॥
ನಿಡುಸುಯ್ಸೆಯ್ತಱವಿನ್ನುಂ ಬೆಮರ್*ನಿಬಿಱಗಾದಂತೆಮೈಕಂಪಮುಂಮುಂ।
ದಿಡೆಯುಂ ರೋಮಾಂಚಮಿನ್ನುಂ ಕಿಡೆಯದು ಕನಸೆಂದೆಂತಿದಂ ನಂಬಲಕ್ಕುಂ॥

ವ॥ ಎಂದು ಸತ್ಯಸ್ವಪ್ನಂಗಳುಮಂ ಸಕಳಶಾಸ್ತ್ರಕೋವಿದರಿಂ ಕೇ
ಳ್ದು ಕೈಕೊಂಡುಮಱಿವುದುಂಟಪ್ಪುದಱಿಂದಿದು ಸತ್ಯಮಂ ಸೆಱೆವಿಡಿವುದಾಗ
ಲೆವೇೞ್ಕುಮೆಂದು ಸತ್ಯರತ್ನಾಕರನಾಕರುಮಾಡದಿಂ ಪೊಱಮಡದೆ ತನ್ನೊಳ್
ಬಗೆದು ಭಾವಿಸುತ್ತಿರ್ಪನ್ನೆಗಂ; ॥೭೪॥

ದಾನೇಭಂ ಪುಂಗವಂಕೇಸರಿ ಸಿರಿಸುಮನೋಮಾಲೆಚಂದ್ರಂಜಿನೇಂದ್ರಂ।
ಮೀನಂ ಕುಂಭಂ ಕೊಳಂ ಪಾಲ್ಗಡಲಿಭರಿಪುಪೀಠಂ ಸುರೋದ್ಯದ್ವಿಮಾನಂ ॥
ಶ್ರೀನಾಗಾವಾಸಮುಚ್ಚಮ್ಮಿಚಯುವನಲಜ್ವಾಲೆಯೆಂದಿಂತಿವೆಲ್ಲಂ ।
ಮಾನಾಲಂಕಾರನೊಳ್ಮಾಡುಗೆ ಜಿನಜನನೀಷೋಡಶಸ್ವಪ್ನದೊಳ್ಪಂ ॥

ಪರಮಾರ್ಹಂತ್ಯಪ್ರಭಾವಂಕುಡುಗೆ ಗಡಣದಿಂ ಕೀರ್ತಿಕಾಮಂಗೆನಿಚ್ಚಂ।
ಸಿರಿಯುಂ ಶ್ವೇತಾತಪತ್ರಂ ಸುಭಗವಿಭವಮುಂ ಚಾಮರಂ ಬೋಧಮುಂ ದಿ ॥
ವ್ಯರವಂ ಸಂಪ್ರೀತಿಯುಂ ಪೂಮಱೆ ಶುಭವನಶೋಕದ್ರುಮಂ ಪೆರ್ಮೆಯುಂ
ಕೇ । ಸರಿಪೀಠಂ ಕಾಂತಿಯುಂ ಭಾವಳೆಯುಮಭಿನುತೋತ್ಸಾಹಮುಂ ದೇವ
ತೂರ್ಯಂ ॥ ॥೭೬॥

ಜಿನನಂ ಪೂಜಿಸಿದಕ್ಕಿ ಪೂಲೆ ಸೊಡರ್ಗಳ್ ಧೂಪಂ ಫಲಂ ದರ್ಪಣಂ।
ನನೆ ಗಂಧಂ ದಧಿ ದರ್ಭೆ ಪೂರ್ಣಕಲಶಂ ತುಂಗಧ್ವಜಂ ತೋರಣಂ ॥
ತೆನೆ ಜಾಗಂ ಮಣಿವಿಷ್ಟರಂ ಚಮರಜಂ ಛತ್ರಾಳಿ ಘಂಟಾಘನ ।
ಧ್ವನಿ ಮುಕ್ತಾಫಲಮಂಡಪಂ ಕುಡುಗೆ ಕಂದರ್ಪಂಗೆ ದೀರ್ಘಾಯುವಂ ॥

ವಿಜಿತಾಘಧ್ವಾಂತಜಾತಂ ಮುಕುಳಿತಕುಮುದಾರಂಭಮುದ್ಬುದ್ಧಭವ್ಯ ।
ವ್ರಜಮುಸ್ತನ್ಯಸ್ತದುಷ್ಕ್ಯಾಸನಸಿ ವಿ[1]ರ[1]ಳೋದಸ್ತದುಸ್ತೀರ್ಥತಾರಾ ॥
ವ್ರಜಮುದ್ಯದ್ಧರ್ಮರಾಗಾಭ್ಯುದಯಬಹಳಸಾಂಧ್ಯೋದಯಂ ಸೂರವ್ಯಂ
ದಾಂ । ಬುಜಬೋಧಶ್ರೀಪ್ರಸನ್ನೋಜ್ಞಂ ಜಿನಪತಿಸಮಯಂ ಸಂತತಂ ಸು
ಪ್ರಭಾತಂ ॥ ॥೭೪॥

ಅರವಿಂದಶ್ರೀಯು ಸೂಚ್ಚಿಂದಿನನತಿಭರದಿಂ ಬಪ್ಪುದಂ ಕಂಡು ಚಂಚ ।
ತ್ಕರದಿಂದಂ ಸೋವುತುಂ ತೀವಿದ ತಿಮಿರಪಿಶಾಚಂಗಳಂ ವ್ಯೋಮಗೇಹೋ॥
ದರಮಂ ಕೈಗೆಯ್ಯುತುಂ ಸಂಪತಿತದಶದಿಶಾಭಿತ್ತಿಭಾಗಂಗಳಂ ಬಿ ।
ತ್ತರಿಸುತ್ತಿರ್ಪ್ಪನೆಂಬಂತರುಣನರುಣನಗ್ರೇಸರಂ ಕಣ್ಗೆ ವಂದಂ ॥ ೭೯॥

ಪರೆಯೆ ಕುರುಳ್ಗಳಂತೆ ತಿಮಿರಂ ಮುಗಿಯುತ್ತಿರೆ ನೆಯ್ದಿಲಚ್ಚಿಯಂ ।
ತಿರೆ ಬೆಮರಂತಿರಾಜಿಸಿರೆ ತಾರಗೆ ತೀರೆ ವಿಭಾತಕಾಂತಿ ಕಾಂತನೊಳ್ ॥
ನೆರೆದು ಸುಖಾಂತದೊಳ್ ಕರಗುತಿರ್ಪಮನೋಹರಿಯಾದ್ರ್ಯಕುಂಕುಮಾಂ।
ಬರಮೆ ಬಟಿಲ್ದವೋಲ್ಪಳಿದುದೈಂದ್ರಿ[2]ಯ ಸಾಂಧ್ಯ[2]ಮಯೂಖಪಲ್ಲವಂ ॥೮೦॥

ಎಳೆದಳಿರಂತೆ ಪೆರ್ಮರದ ಕೊಂಬುಗಳೊಳ್ ನವಧಾತುನಿರ್ಝರಂ ।
ಗಳ ಪ್ರನಲಂತೆ ಶೈಲಶಿಖರಂಗಳೊಳುಜ್ಜ್ವಲಮಪ್ಪ ಮಾಣಿಕಂ ॥
ಗಳ ರುಚಿ ಪರ್ವಿದಂತೆ ಸುರಕೂಟಕನತ್ಕಳಶಂಗಳೊಳ್ ತಳ ।
ತ್ತಳಿಸಿದುದೀಷದುನ್ಮಿಷಿತಮಂಡಳಚಂಡಕರಾಂಶುಜಾಳಕಂ ॥ ॥ ೮೧॥

ಜಳಧಿಚಳೋರ್ಮಿಶಾಮರಚಯಂಗೆ ದಿಶಾಧಿಪದಿಗ್ಗಜೇಂದ್ರಸಂ ।
ಕುಳಪರಿವಾರಭಾಗಿಗೆ ನಭೋಮಣಿಮಂಡಪಮಂಡನಂಗೆ ಕ ॥

---

ಪಾ— 1 ದ. ಚ॥ 2 ದಿಶೋದ್ಯ. ಚ॥

ಣ್ಗೊಳಸೆ ಜಗನ್ಮಹಾಪ್ರಭುಗಭೀಕ್ಷಿಸಲೆತ್ತಿದ ಸುಪ್ರಭಾತಮಂ ।
ಗಳಮಣಿದರ್ಪಣಕ್ಕೆ ದೊರೆಯಾಯ್ತುದಯಾದ್ರಿಯೊಳರ್ಕಮಂಡಳಂ॥೮೬॥

ವ॥ ಅಂತುಮಲ್ಲದೆಯುಂ,

ಅನುರಾಗಂ ನೀರಜಶ್ರೀಗೆಳವಡೆ ಬೆಳಗಿಂ ಬಳ್ಕೆ ಸಂಪನ್ನತಾರಾ ।
[1]ರಿ[1]ನಿಕಾಯಂ ಮಂಡಳಾಗ್ರದ್ಯುತಿಗೆ ತೆಗೆಯೆ ಲೋಕಕ್ಕೆದೃಗ್ಲೋಕನಾನಂ॥
ದನಮಂ ಮುಂದಿಟ್ಟು ಚಂಚತ್ಕನಕಕಲಶಮಂ ತೀವಿ ಸರ್ವಾಶೆಯಂ ಭೂ।
[2]ವಿ[2]ನುತಂನಿಂದಂತೆ[3]ರಾಜ್ಯಾಭ್ಯುದಯದಿನೆಸೆದಂ[3]ಪದ್ಮಿನೀಜೀವಿತೇಶಂ ॥೮೭॥

ಇದೆ ಹೇಷಾಘೋಷದಿಂ ವಾಹಳಿಗೆ ಕರೆವವೊಲ್ ಕಟ್ಟೆ ಬಂದಶ್ವಮೀಯಿ।
ರ್ದುದೆ ಪರ್ವಿಂ ಪಣ್ಣಿ ಬಂದೋಜೆಗೆ ನಿಱುಸಿದ ಕಟ್ಟಾನೆ ಸೇವಾರಸೋತ್ಸೇ
ಕದಿನೀಗಳ್ ದೇವ ಬಂದಿರ್ದಪ್ಪುದು ಸಕಳರಾಜನ್ಯಕಂ ಮಂತ್ರಿವರ್ಗಂ ।
ಪದನಂ [4]ಪಾರ್ದಿರ್ಪ[4]ದಿನ್ನುಪ್ಪವಡಿಸುಜನತಾನೇತ್ರನೀರೇಜಭಾನೂ ॥೮೮॥

ವ॥ ಎಂದು ಮೃದುಮಧುರಗಂಭೀರಧ್ವನಿಯಿನೋದುವ ಪ್ರಭಾತಪುಣ್ಯ ಪಾಠಕಮಾಗಧನಿವಹಕ್ಕೆ ಕನಲ್ದೊನಲ್ದು ಕಮನೀಯಭಿತ್ತಿಭಾಗಂಗಳಂ ಕುಂಕುಮರಸದಿಂ ಕಾಲ್ವಳಿಗೊಳ್ವಂತೆ ಗವಾಕ್ಷವಿವರದಿಂ ಪೊಕ್ಕು ಪಸರಿ ಸುವೆಳವಿಸಿಲನಳುರ್ದು ಕೊಳ್ವ ಕಾಮಕಾಳಾನಳಜ್ವಾ[5]ಳೆಗೆತ್ತ[5]ಳ್ಕಿದಂತಿ ರಳ್ಕಿ ಧೈರ್ಯಮನವಲಂಬಿಸಿ ಬಿಸುಸುಯ್ದು ಶಯ್ಯಾತಳದಿಂದೆಂತಾನುಮೆ ದ್ದು ನಿಜಹೃತ್ಕವಾಟಪುಟಮಂ ತೆಱೆದ ತರುಣಿಯು ತೆಱನನಱಿದು ತೋ ಱುವಂತೆ ಮಣಿಕಂಕಣ[6]ರಘಣತ್ಕಾ[6]ರಕ್ಕೆ ಸೆಜ್ಜೆವ[7]ಳ[7]ನುಜ್ಜುಗದಿಂ ಕನಕಕ ವಾಟಸ್ರಟಮಂ ತೆಱೆಯೆ ಪ್ರೀಱಮಟ್ಟು ಕರುಮಾಡದ ನೆಲೆಯಿನವತರಿಸಿಯಾ ಕನ್ನೆಯ ಮುಖಮುಕುರಮಂ ಪೋಲ್ತೀ ಕನ್ನಡಿಯುಮೆನ್ನನೊಳಗುಮಾ ಡುವುದಾವ ಕೌತುಕಮೆಂಬಂತೆ ಮಂಗಳಮಣಿದರ್ಪಣಮನೀವ್ಯೆಸುತ್ತುಮ ವಳೋಕಿಸಿ ಮೋಹರಸದೊಳ್ ಮುೞುಂಗಿದ ತನ್ನನೆನ್ನನೆಂದೀಕ್ಷಿಸುವಂತಿರಾ

ಪಾ— 1 ತಿ. ಕ॥ ಚ॥ 2 ವಿ. ಚ॥ 3 ಜಾತಾಭ್ಯುದಯಮನೆಸೆದಪಂ. ಕ॥ ಜ॥; ಜಾತ್ಯಾ.........ಗ॥ 4 ಸಾರ್ದಪ್ಪು. ಕ॥ 5 ಳೆಗಳ್ಗೆ ತ. ಕ॥ 6 ಝುಂಕಾ. ಗ॥ 7 ನೆಯ. ಕ॥

ಜ್ಯಾವೇಕ್ಷಣಂಗೆಯ್ದನಂತರಂ ರೋಮಕೂಪವಿವರ[1]ವಿನಿಸ್ಸೃತ[1]ಮನೋಭ
ವಾನಳಧೂಮದಾಮಾವೃತನಾದಂತೆ ಶುಚಿಸುರಭಿಸೋಷ್ಣಸಲಿಲಸ್ನಾನಸಂಸ
ಕ್ತಸೂಕ್ಷ್ಮಧೂಮಲೇಖಾಳಂಕೃತಶರೀ[2]ರಂ,[2] ಜಾಹ್ನವೀಫೇನಪಿಂಡಪಾಂಡು
ರಿತಜಟಾಜೂಟಧೂರ್ಜಟಿಯಂತೆ ಸದಯಪ್ರಕ್ಷಾಳನಪರಿಲಘುದುಕೂಲವಸನ
ವೇಷ್ಟಿತಮಸ್ತಕಂ, ಪೊನಪದ್ಮರಾಗಪಟಳಪಾಟಳಿತಮಣಿಪಾದುಕಾಪದವಿ
ನ್ಯಾಸರಣಿತಮಣಿಕುಟ್ಟಿಮಂ, ಜಗಮಂ ಬಗೆದ ಬೇಗದೊಳ್ ಗೆಲ್ವ ವಿಷಮ
ಶರನನವಟಲೆದ ಗೆಲ್ಲಂ ನಿನ್ನೊಳಲ್ಲದೆ ಸಲ್ಲದೆಂದು ಸೊಲಿಸಲ್ ಪೋಪಂತೆ ರಾ
ಜಾಲಯಾಲಂಕಾರಭೂತಶೀತಳಜಿನಾಲಯಕ್ಕೆ ಪೋಗಿ ತ್ರಿಃಪ್ರದಕ್ಷಿಣಂಗೆ
ಯ್ದು ದೂರದ್ವಾರದೇಶಪರಿಕ್ಷಾಳಿತಕರಚರಣಕಮಳಂ, ತದಾಲಯಮಂ ಪೊ
ಕ್ಕು ಮಣಿಮಂಟಪದ ಮಧ್ಯಸ್ಥಿತಚಂದ್ರಕಾಂತಜಿನಬಿಂಬಕ್ಕೆ ವಿನಮಿತೋ
ತ್ತಮಾಂಗನಭಿಮುಖನಾಗಿ ಕೈಗಳಂ ಮುಗಿದು,　　　　　　　॥೮೫॥

ಶ್ರೀಯಂ ಕೂರಿಸಲಾಜ್ಞೆಯಂ ಪಸರಿಸಲ್ ಸತ್ಕೀರ್ತಿಯಂ ಕೊರ್ವಿಸಲ್।
ಕಾಯಕ್ಲೇಶಮನಟ್ಟಿಸಲ್ ದುರಿತಮಂ ನಿರ್ಮೂಲಿಸಲ್ ನಿಂದ ನಿ ॥
ಟ್ಟಾಯಂ ನಿಟ್ಟಿಸಲೊಳ್ಪನಪ್ಪಿತಣಿಸಲ್ಬೇಳ್ಪಂಗೆ ಬೇಳ್ಪೀಸುಖೋ ।
ಪಾಯಂ ತ್ವಚ್ಚರಣಪ್ರಣಾಮಮಖಿಳಂ ಶ್ರೀಮಜ್ಜಿನಾಧೀಶ್ವರಾ ॥೮೬॥

ಕಡುಕೆಯ್ದುಟ್ಟದನಿಕ್ಕಿಯುಂ ಸುಭಟನೈ ಸಂಸಾರಕಾಂತಾರಮಂ ।
ಕಡಿದುಂ ಶ್ರಾಂತಿವಿಹೀನನೈ ಸುವಿದಿತಂ ಜೀವಾದಿತತ್ತ್ವಂಗ[3]ಳಂ[3] ॥
ನುಡಿದುಂ ಮೌನಸಮೇತನೈ ವಿಮಳನಶ್ರೀದೋರ್ಲತಾಪಾಶದೊಳ್ ।
ತೊಡರ್ದುಂ* ಮುಕ್ತನೆಯೇಂ ಕರಂಪಿರಿ[4]ಯೆಯೋ[4]ಶ್ರೀಮಜ್ಜಿನಾಧೀಶ್ವರಾ॥

ಬನಮಂ ಸಾರ್ದ ನರಂಗೆ ಪಾವನಫಲಂ ಪ್ರೋತ್ಫುಲ್ಲಪಂಕೇಜಕಾ ।
ನನಮಂ ಸಾರ್ದ ನರಂಗೆ ಶೀತಳಜಲಂ ಸಾರಸ್ವತಾ[5]ಧಾರ[5]ಸ ॥
ಜ್ಜನರಂ ಸಾರ್ದ ನರಂಗೆ ಸದ್ಗುಣಗಣಂ ನಿನ್ನಂಘ್ರಿಯಂ ನಂಬಿ ಸಾ ।
ರ್ದ ನರಂಗುತ್ತಮಸೌಖ್ಯಮಾವಗಹನಂ ಶ್ರೀಮಜ್ಜಿನಾಧೀಶ್ವರಾ ॥೮೮॥

---

ಪಾ— 1 ವಿನಿರ್ಗತ ಜ॥ 2 ರ. ಚ॥ 3 ಳೊಳ್. ಕ॥ ಚ॥
4 ಯನೋ. ಚ॥; ಯನ್ನೈ. ಗ॥ 5 ದಾನ. ಕ॥ ಗ॥

ಕುಳಿವೆ*ರಿಂ ಕುಳಿವಾ*ಲಿನೀರ್ದಳಿ[1]ಪ[1]ದಿಂ ನೀಹಾರದಿಂ ಹಾರದಿಂ ।
ತಳಿರಿಂ ತಣ್ಣೆಲರಿಂದಡಂಗವಶಸೈಜಾಳಜ್ವಾಲಸಂತಾಪಮಂ ॥
ಕಳೆಗುಂ ಸಂಸ್ಮೃತಿಮಾತ್ರದಿಂದೆ ಮನು[2]ಜಂಗೆಂಬಂತದೇನೊಂದು[2] ಶೀ ।
ತಳಮೋ ಪದ್ಮಸನಾಭಿ ನಿನ್ನ ಚರಣಂ ಶ್ರೀಮಜ್ಜಿನಾಧೀಶ್ವರಾ ॥೪೯॥

ನುಡಿ ಕೈಗನ್ನಡಿ ವಿಶ್ವದರ್ಶನಪರಗಾರ್ಚಾರಮಾಚಾರ್ಯಕಂ ।
ನಡೆಗೆಟ್ಟೀಭುವನಕ್ಕೆ ಶಾಂತಕೆ ನಿಜಾಕಾರಂ ಶಿಲಾಶಾಸನಂ ॥
ಸೊಡರಜ್ಞಾನತಮಕ್ಕೆ ನಿನ್ನ ಮತಮೊಂದಂದೆಂತು ಪೇೞ್ ನಿನ್ನ ಕೇ ।
ಸಡಿಗಾಂ [3]ಕೂರೆನ[3]ದೆಂತು ಮಾಣದೆಜಗಂ ಶ್ರೀಮಜ್ಜಿನಾಧೀಶ್ವರಾ ॥೯೦॥

ಮನಮಂ ಜಾನಿಸಲೀಯದಿರ್ಪುದು ನಿನ್ನಾ ಸ್ಯಾಬ್ಜದೊಳ್ ಮದ್ವಿಲೋ ।
ಚನಭೃಂಗದ್ವಯಮೊಂದನೆಂದಪೆನಿ[4]ದಂ[4] ವೈರಾಗ್ಯದಿಂ ನೀನೆ ಕಾ ॥
ಮನನೇಂ ಗೆಲ್ದಯೊ ನಿನ್ನ ಸಾತಿಶಯರೂಪಾಕಾರಮಂ ಕಂಡು ಕಾ ।
ಮನೆ ಕಣ್ಸೋಲ್ತನೊ ಪೇೞುದಂ [5]ನಗಬೆ ನೀಂ[5] ಶ್ರೀಮಜ್ಜಿನಾಧೀಶ್ವರಾ ॥

ಭಯದಿಂ ನಿನ್ನಯ ನಾಮ[6]ಮೊಂ[6]ದಡಗಲೀಪಂಚೇಷು ನೀನಿರ್ದ ಸಂ ।
ಶ್ರಯಮಂ ಸಾರ್ಗುಮೆ ಯುಷ್ಮದಂಘ್ರಿನತನೆಂದಾರ್ದೆನ್ನನೊಟ್ಟೈಪಪ್ಪ ॥
ಕ್ಷಯನಂ ತೂಳ್ದುವುದುಳ್ಳೊಡೆನ್ನ ಮನದೊಳ್ನಿಂನಿಟ್ಟೆಯಿಂದಿರ್ಪುದಂ ।
ದಯಗೆಯ್ ಕೈಗಳನೊಡ್ಡಿ [7]ಬೇಡಿದೆನಿದಂ[7] ಶ್ರೀಮಜ್ಜಿನಾಧೀಶ್ವರಾ ॥೯೨॥

ತೆಗೆದೈಮೋಕ್ಷದಬಟ್ಟೆಯಂಬೆಳಗಿದೈತ್ರೈಲೋಕ್ಯದೊಳ್ ಧರ್ಮಮಂ ।
ಬಗೆದೈ ನಿನ್ನದೊಂದುಗುಂದದಱಿದೈ ಸರ್ವಾರ್ಥಸಂದೋಹಮಂ ॥
[8]ನೆಗೆ*ಟ್ಟೈ[8]ಲೋಕದ ನೀಳ್ದ ತುತ್ತತುದಿಗಿನ್ನುಂ ಕೃತ್ಯಮೊಂದುಂಟು ಕೈ ।
ಮುಗಿದೆನ್ನಿಷ್ಟಮನೀವ ಶಿಷ್ಟಕರಣಂ ಶ್ರೀಮಜ್ಜಿನಾಧೀಶ್ವರಾ ॥೯೩॥

ವ॥ ಎಂದು ವಸ್ತುಸ್ತವ ರೂಪಸ್ತುವ ಗುಣಸ್ತವಂಗಳಂ ಮಾಡಿ,

---

ಪಾ— 1 ತ. ಕ. ಜ। 2 ಜರ್ಗಂಬಂದದೆಂಬಂತೆ. ಚ॥ 3 ಕಂಡಿರ. ಚ।
4 ದೇಂ. ಚ॥ 5 ಗಡೆನಗಂ ಕ॥ 6 ಮೆಂ. ಚ॥ಜ॥
7 ಬೇಡುವೆನಿದಂ. ಚ॥ 8 ನೆಗೆದೈ ಚ॥

ಜಳಜಾಮೋದವಿಮಿಶ್ರತೀರ್ಥಜಳದಿಂ ಚಾಂಪೇಯ[1]ಪಿಂಗಾ[1]ಜ್ಯಕೋ |
ಮಳಧಾರಾವಳಿಯಿಂ ಸುಧಾ[2]ಕ್ತ[2]ಮಧುರಾಮೋದಕ್ಷರತ್ಕ್ಷೀರಸಂ ||
ಕುಳದಿಂ ನೀರಜಕೆಂದಕಾಂತವಧಿಪಿಂಡಾಸಾರದಿಂ ಸಾರ್ದ್ರ ಶೀ |
ತಳ[3]ದಿಂ[3] ಜಾಣ್ಮೆಗೆ ಮಜ್ಜನಂಬುಗಿಸಿದಂ ಸೌಂದರ್ಯಸಂಕ್ರಂದನಂ || ೯೪ ||

ಪೊಸನೀರಿಂ ಪೊಸಗಂಪಿನಿಂ ಪೊಸತು ಬೆಳ್ಪಾದಕ್ಕಿಯಿಂ ದೇವನಂ |
ಪೊಸಪೂವಿಂ ಪೊಸತುಯ್ಯಲಿಂ ಪೊಸವೆನಿಪ್ಪುದ್ದಾಮದೀಪಂಗಳಿಂ ||
ಪೊಸಧೂಪಂಗಳ ಧೂಮದಿಂ ಪೊಸರಸಕ್ಕಿಂ[4]ಬಾವ[4] ಪಣ್ಣಿಂದಮು |
ರ್ಚಿಸಿ ಕಣ್ಣಾರ್ವಿನಮೊಲ್ದು ನೋಡಿ ನಲಿದಂ ವಾಗ್ವಲ್ಲಕೀವೈಣಿಕಂ || ೯೫ ||

ಮದನಾಗ್ನಿಜ್ವಾಲೆಯುಂ ನಂದಿಸಿದನೆನೆ ಜಿನಸ್ನಾನಗಂಧಾಂಬುವಿಂ ನಾಂ |
ದದಯೋನಂಗಾಸ್ತ್ರಪಾತಕ್ಕಗಿದು ಕವಚಮುಂ ತೊಟ್ಟವೊಲ್ಪೂಸಿದಂ ಶ್ರೀ ||
ಪದದಿವ್ಯಾ[6]ಮೋದಗಂಧದ್ರವಮನಿಡುವವೋಲ್ ರಕ್ಕೆಯುಂ ಮೌಳಿಯೊಳ್ತೀ |
ವಿದನಾಗಳ್ ಸಿದ್ಧಶೇಷಾಕ್ಷತಮನನುದಿನಂ [7]ಕಾವ್ಯ[7]ಕರ್ಣಾವತಂಸಂ || ೯೬ ||

ಇದು ವಿದಿತಪ್ರಬಂಧವನವಿಹಾರಪರಿಣತ ಪರಮಜಿನಚರಣರವ್ರಹೈಮಾಚಲೋಚ್ಛಲಿತ
ನಖಮಯೂಖಮಂದಾಕಿನೀಮಜ್ಜನಾಸಕ್ತ ಸಂತತೋತ್ಸಿಕ್ತದಾನಾಮೋದ
ಮುದಿತಬುಧಮಧುಕರಪ್ರಕರ ಕವಿರಾಕುಂಜರ ವಿರಚಿತಮಪ್ಪ

## ಲೀಲಾವತಿಯೊಳ್

## ನಾಯಿಕಾಸ್ವಪ್ನದರ್ಶನಂ

## ತೃತೀಯಾಶ್ವಾಸಂ.

---

ಪಾ— 1 ದಿಂದಾ. ಚ|| 2 ಚ್ಛಂ. ಚ|| 3 ಮಂ. ಚ|| 4 ಪುಳ್ಳೆ. ಜ||
5 ತಚ್ಛ್ರೀಪದಮುಗ್ಧಾ. ಕ|| ಗ|| 6 ವಾಕ್ಯ. ಕ|| ಗ|| 7 ಹರ್ಮ್ಯ. ಗ||

ಚ ತು ರ್ಥಾ ಶ್ವಾ ಸ ಂ .

ಶ್ರೀಯಂ ಸರಸತಿಯಂ ಜಯ ।
ಜಾಯೆಯನುರದೊಳ್ ಮುಖಾಬ್ಜದೊಳ್ಭುಜದೊಳ್ ತ ॥
ಳ್ತಾಯುವವುನಕ್ಕೆ ಬಿದಿ ಪೊ ।
ಯ್ದಾಯುವ್ರೊಲಿರೆ ತಳ್ತನೊಳಗೆ ಮಾನವಮದನಂ ॥ ॥ ೧॥

ಪೆಱತು ನುಡಿ ಪೆಱತು ಭಾವನೆ ।
ಪೆಱತೆಸಕಂ ಪುಗದು ತರುಣಿ ತೀವಿದ ಮನದೊಳ್ ॥
ಪೆಱತೇಂ ತನ್ನ ಮನಂದೇಂ ।
ಮಱೆದನೊ ಪರವಶತೆಯಿಂದೆ ವಿತರಣಮುಗ್ಧಂ ॥ ॥೨॥

ಮದನಂ ಕಾರುಣ್ಯದಿಂದಂ ಬೆಸಸಿದ ತೆಱದಿಂದ್ರಿಯಂ ಪೇಸಿ ಪೇೞ್ದಂ ।
ದದೆ [1]ಹಾಹ[1]ಕ್ಕಳ್ಕಿ ಮೋಹಂ ನಡಪಿದಳವಿಯಂಸ್ವಪ್ನ ಸೂಕ್ಷ್ಯಂದಿಟಂತೋ॥
ಱಿದ ಪಾಂಗಿಂ [2]ಮೆಚ್ಚುಗೆಯ್ದಿ[2]ಚ್ಚೆಯೆ ರಣರಣಕಂಮಾಡಿದಂತಾಡಿದಂ ಮಾ।
ಣದೆ ನಾನಾನಾಟಕಂ ತನ್ನೊಳ್ ನಲಿವಿನೆಗಂ ರೂಪಕಂದರ್ಪದೇವಂ ॥ ೩॥

ಪರತಂತ್ರನೆನಿಸಿದೆನಗಿ ।
ನ್ನರಸೇವ್ರದೊ ಹಾಸ್ಯಮೆಂಬವ್ರೊಲ್ ರಾಜ್ಯದೊಳಂ ॥
ಭರವಂ ಬಿಸುಟಿರೆ ಬೇಱೊಂ ।
ದರಸುತನಂ ಪೊಸತು ನೆಗೞ್ದುದರಸಂಗಾಗಳ್ ॥ ॥ ೪॥

ಗುರು ಕಾಮಂ ಮಂತ್ರಿವರ್ಗಂ ಕರಣಸಮುದಯಂ ಸೇನೆ ಸಂಕಲ್ಪಜಾಳಂ
ಪರಿಚಾರಂ ಚಿಂತೆ ದೂತಂ ಮನನನುಚರನಾಶಾನುಬಂಧಂ ಸಹಾಯಂ ॥
ಪರಿತಾಪಂ ಕಾಪು ಸುತ್ತುಂತಳೆರದ ತರುಣೀರೂಪು ಕಣ್ಗಳ್ ಪ್ರತೀಹಾ ।
ರ[3]ರ[3] ತಂಡಂ ಸುಯ್ಯೆನಲ್ಕೇನಲೆದುದೆೊ ನಿಜಸಾಮ್ರಾಜ್ಯಮಂರಾಗರಾಜ್ಯಂ॥

ವ॥ ಅಂತುಮಲ್ಲದೆಯುಂ,

ಧೃತಿ ದುಃಖೋದ್ರೇಕಮಂ ಚಾತುರಿ ತರಳತೆಯಂ ಪ್ರಾಭವಂ ದೈನ್ಯ
ಮಂ ಸ । ಸ್ಮತಿಮಿಥ್ಯಾಮೋಹಮಂ [4]ಮಾನಿತೆಯು[4]ತನುವಿಕಾರೋರ್ಮಿ

ಪಾ— 1 ಹೋ ಹ. ಜ॥ 2 ಚ್ಚಿ ಕೈವಿ. ಚ॥ 3 ರ. ಕ॥ ಗ॥ ಚ॥
4 ನೂತನಮ. ಕ॥ ಗ॥ ಜ॥

ಯಂ ತನ್ನ ಗಂಭೀ ॥ ರತಿ ಗಾಢೌತ್ಸುಕ್ಯಮಂ ಮಿಕ್ಕಱಿವು ವಿನಯಮಂ
ಮಾನಗರ್ವಂ ವಿವೇಕ । ಚ್ಯುತಿಯಿಂ ಸೌಭಾಗ್ಯದರ್ಪಂ ನಿಜವಿಕಳತೆಯಿಂ
ನೀತಿ ನಾಣ್ಗಾದ ಕೇಡಂ ॥ ॥೬॥

ಬವರಂಗೆಯ್ದಿಱಿವವೊಲವ ।
ಯವದಿಂ ಪೊಱಪೊಣ್ಮಲೀಯದಿರೆ [1]ಕೃತ್ರಿಮ[1]ಸಾ ॥
ಷ್ಟ್ರವದಿಂ ಸಲಿಲಮುಮಂ ಬಾ ।
ಡವನುಮನೊಳಕೊಂಡ ಕಡಲನರಸಂ ಪೋಲ್ತಂ ॥ ॥೭॥

ಅಂತು ಬಲಿದೊಡ್ಡಿದವನೀ ।
ಕಾಂತನ ದೃಢತುಂಗಧೃತಿಧರಾಧರಮುಂ ತ ॥
ತ್ಕಾಂತಾಸ್ಫುರದಪ್ರತಿಹತ ।
ಚಿಂತಾಶನಿಯುರ್ಚೆ ನುಚ್ಚುನೂಱಾಯ್ತಾಗಳ್ ॥ ॥೮॥

ಮಗುೞ್ದಂ* ಮಗುೞ್ದಂ* ಕನಸಿಂ ।
ಮಗುೞ್ದಂ* ವಧುವೆಂದು ನೆಲೆಯನೆಱುವನೊಳಗಂ ॥
ಪುಗುವಂ ಪವಡಿಸಿ ಕಣ್ಣಂ ।
ಮುಗಿವಂ ಮುಸುಕಿಡುವನಸಿಯಳಂ ಭಾವಿಸುವಂ ॥ ॥೯॥

ಭಾವಿಸೆ ತನ್ನಯ [2]ನಯನೇಂ[2] ।
ದೀವರದೊಳ್ ಸುೞಿಯೆ ಕನ್ನೆ ತಾನದು ಕನಸೆಂ ॥
ದೋವುವನೊಯ್ಕನೆ ಕಿವಿಯಂ ।
ತೀ[3]ವ್ರವ[3] ಕಳಕಳಕೆ ಕಿನಿಸಿ ಕಂಗನೆ ಕನಲ್ವಂ ॥ ॥೧೦॥

ಪುಸಿನಿದ್ದೆಗೆಯ್ವನೆಮೆಯಂ ।
ನಸುದೆಱೆಯಲ್ ಕಣ್ಣನಿನಿಸು ಮಿಡುಕುವ [4]ನಿರ್ದೆಯಂ*[4] ॥
ಕುಸುಮಶರಂ ಮಸಕದಿನಿಸೆ ।
ಬಿಸುಸುಯ್ಯುತ್ತಿರ್ದು ಸುತ್ತಿ ಸುೞಿಯುತ್ತಿರ್ಪಂ ॥ ॥೧೧॥

---

ಪಾ— 1 ಕೃತ್ತಿಂ. ಚ॥ 2 ಮನದಿಂ. ಚ॥ 3 ವಿದ. ಚ, ಜ॥
4 ನವನಂ ಕ॥ ಚ॥

ಪ್ರಿಯಮಿನಿಸಿಲ್ಲದೊರ್ವರ್ ನೆಗೞ್ದೋಲಗಸಾಲೆಯೊಳೊರ್ವರ್ ಚಿತ್ರಶಾ ।
ಲೆಯೊಳನಿಸೊರ್ವರ್ ಪಂತಣದ ಸಾಲೆಯೊಳೆಂದಿರದೊರ್ವ[1]ಚಂದ್ರ[1]ಶಾ ॥
ಲೆಯೊಳನಿಸೊರ್ವರ್ ಸಂದ [2]ಸುತಸಾರದ[2] ಶಾಲೆಯೊಳೊರ್ವರ್ನಾಟ್ಯಶಾ ॥
ಲೆಯೊಳನಿಸೊರ್ವರ್ಕೇಳಿಗೃಹಶಾಲೆಯೊಳೊರ್ವರ್ವಿನೋದಶಾಲೆಯೊಳ್ ॥

ಬಿನದದಿನೊರ್ವರ್ ಬೀಣೆಯಿನದೊರ್ವರ್ ಸುಗೀತದಿನೊರ್ವರ್ವಾದ್ಯವಾ।
ದನದಿನದೊರ್ವರ್ ನೃತ್ಯದಿನದೊರ್ವರ್ ಕಥೋಕ್ತಿಯಿನೊರ್ವರ್ ಕಾವ್ಯಬಂ॥
ಧನದಿನದೊರ್ವರ್ ನಾಟಕದಿನೊರ್ವರ್ ಪುರಾಣದಿನೊರ್ವರ್ ಜೂದಿನೊಂ ।
[3]ದು ನೆ[3]ವದಿನೊರ್ವರ್ ಕುಬ್ಜಖಗಯುದ್ಧದಿನೊರ್ವರ್ ನಿಯುದ್ಧಕೇಳಿಯೊಳ್॥

ಕೊಳಗಳೊಳೊರ್ವರ್ [4]ಕೋ[4]ಡುವೆಳಮಾವಿನ ಜೊಂಪದೊಳೊರ್ವರ್ ಜಾದಿಯೊ । ಳ್ಮೆಳೆಗಳೊಳೊರ್ವರ್ ತಣ್ಬುಟಿಲೊಳೊರ್ವರ್ತಮಾಳದ ಸಾಲೊಳೊರ್ವರ್ ಶೀ ॥ ತಳಕದಳೀಗೃಹಾವಳಿಯೊಳೊರ್ವರ್ ಕುಳಿರ್ಕೊಳುತಿರ್ಪರ್ ಕೇತಕೀ । [5]ತಳದೊಳ[5]ದೊರ್ವರ್ ಪ್ರೀತಿಗಳೆವಂ ಕವಿತಾಕಳಿಕಾಮ್ರಕೋಕಿಳಂ ॥ ॥೧೪॥

ನೋಡದ ಚಿತ್ರಮಾಡದೆಸೆ ಕೇಳದ ಬೇಟದ ಮಾತು ಮೆಯ್ಯನೀ ।
ಡಾಡದ ತಣ್ಬುಟಿಲ್ ಬಗೆಗೆ ಬಾರದ ಕಲ್ಪನೆ ಕಾಪೆದಿಕ್ಕಿಯೊ ॥
ಲಾಡದ ಪೂಗೊಳಂ ಪುಗದ ನಂದನಮಿಲ್ಲೆನೆ ಕಾಮದೇವನೊ ।
ಲ್ದಾಡಿಪ ಜಂತ್ರಮಾತನೆನಲಾಡಿದನಾರತಿರಾಗದೋಹಳಂ ॥ ॥೧೫॥

ವ॥ ಅಂತು ಕುಸುಮಶರನ ಕೂರ್ಗಣೆಗಳ್ ತಾಗದ ತಾಣಮುಮನಂಗಸಂತಾಪವಾಗದೆಡೆಯುಮನಱಿಸುವಂತೆ ಮಱುಗಿ ಮನವೆಳದುಮವರಿಯೆ ಸುೞಿದಾಡುತ್ತುಂ ಕೇಳೀವನದ ಕೆಲದೊಳ್ ಶಶಿಕಾಂತದಿಂ ಕಡೆದು ಮಾಡಿದುದಱಿಂ ಕಾಮನ ಕರುಮಾಡದಂತೆ ಕರಮೆಸೆಯೆ ಬೆಳ್ಮುಗಿಲ ಬೆಳ್ಳಿವೆಟ್ಟಮಂ ಪುಗುವ ಪೀಯೂಷಮಯೂಖನೊಪ್ಪಮನಪ್ಪುಕೆಯ್ದು ॥೧೬॥

ಪ್ಲುತಲೀಲಾಮೃಗಜಾಳಮಂ ಶುಕಪಿಕವ್ಯಾಹಾರಸಂಪಾದಿತ ।
ಪ್ರತಿನಾದೋದಯಮಂ ವಿನೋದವನಿತಾನೇತ್ರಪ್ರಭಾಕೌಮುದೀ ॥

ಪಾ— 1 ಭದ್ರ. ಗ॥ ಚ॥ 2 ಸುತಕಾರದ ಕ॥ ಗ॥; ಶ್ರುತಸಾರದ. ಜ॥
3 ದನಿ. ಕ॥ ಚ; ಜ॥ 4 ಕೂ. ಚ॥ 5 ದಳದಲ. ಕ॥ ಚ॥

ಸ್ಫುರಿತಮಾನಿರ್ಝರಸ್ಫಾರಮುಂ ಮದನಮಯೂರೀಲಾಸಿಕಾರಂಗಮುಂ ।
ಕೃತಕಾದ್ರೀಂದ್ರದ ಶೀತಕೋಶ[1]ಗೃಹಮುಂ, ಪೊಕ್ಕಂ ಮಹೀವಲ್ಲಭಂ ॥೧೭॥

ವ॥ ಅಂತು ಪೊಕ್ಕು ಕಿಱಿದಂತರದೊಳಂದೂಪವಳದ ಪೆತ್ತ ಪಲವೆಳಗುಗಳ್ ಪೊಱಗೆ ಪೊಣ್ಮುವ ಪೊಸವೆಳಗಂ ಪೊತ್ತು ನೋಂಕೆ ಜರಿದು ಬಿರ್ದ ಬಲಿಗಂತಿರಿರ್ದ ಮೌಕ್ತಿಕಶಿಲಾತಳಮುಂ ನಿತಂಬತಟಕ್ಕೆ ಪಕ್ಕುವಾಡವದಱಮುಂದೆ ಮಂದಯಿಸಿ ಪೞ್ಚಿಯ ಪಾಸಱೆಯಂತಿರ್ದ ಪಸಲೆಯನಲಂಕರಿಸಿ ಪೂರ್ವಪರಿಚಯಕ್ಕೆ ಪರಿತಂದು ಕರತಳದೊಳ್ ತೀವಿದ ಮರಕತಮುದ್ರಿಕೆಯ ಪಸುರ್ವೆಳಗುಗಳನಾ ಪಸುರ್ವುಲ್ಲೆಗೆತ್ತು [2]ಮುಸುಂಬಿ[2]ನೊಳಾರಯ್ವ ದೀವದ ಪುಲ್ಲೆಯ ಕೋಣಸುಗಳ್ಗೆ ಪುಲ್ಲೆಸಳಂ ಸೆಱೆದು ನೀಡುತುಂ ದ್ವಾರದೇಶದೊಳ್ ನಿಱಿಸಿದ ಪಿಂಛಾತಪತ್ರಕ್ಕೆ ಮುತ್ತಿನ ಸತ್ತಿಗೆಯ ಚೆಲ್ವನೊಳಗುಮಾಡಿಯುಂ, ನುಣ್ಬಸಲೆಗೆ ಪನಿಪುಲ್ಲ ಪಸಲೆಯ ಪ್ರಸಿದ್ಧಿಯನಾಗುಮಾಡಿಯುಂ, ಚಾಮರದಿಂ ಬೀಸುವ [3]ಬೀಸು[3]ಗಾಳಿಯ ತಣ್ಪಿನಿಂ ತೊಯ್ದ ನನೆಲತೆಗಳ ಮೊಳದ ಮನ್ನಣೆಯ ಕನ್ನೆಯರ ಲತಾಂಗಂಗಳೊಳ್ ಲಾವಣ್ಯರಸವಿಸರದ ಬಿಂದುಗಳ್ ತಲೆದೊಱೆವುವೆಂಬ ಕೌತುಕಮುಂ ಕೊನರಿಸಿಯುಮಾವಿಳಾಸಿನಿಯರ ವಿಲೋಚನಚಂದ್ರಿಕೆಯ ಕೋೞಿಂ ಚಂದ್ರಕಾಂತದ ಕಲ್ಗಳೊಸರ್ತುವೆಂಬ ಸಂದೆಗಮುಂ ಮುಂದಿಡೆಯುಂ ಮಾಣದೆ ಪಳಿಕಿನ ಶಿಲೆಯೊಳಪ್ಪಳಿಸಿ ಬೀಳ್ವ ಕೃತಕನಿರ್ಝರಜಲಧಾರೆಗಳೊಱಂತೆ ತೂಱೆ ತುಱುಗುವ ತುಂತುರ್ವನಿಗಳ್ಗೆ ಮೆಯ್ಯನೊಡ್ಡಿ ಮುತ್ತಿಂ ಮಾನಸನಾದಂತೆ ಮುತ್ತಿನ ಸಿಲೆಯುಂ ಮಲಂಗಿರ್ದ ಭೂಲೋಕಕಂದರ್ಪದೇವನನನತಿದೂರಾಂತರದೊಳ್ ॥

(ಸ್ವಾಗತವೃತ್ತಂ)

ನೋಡಿ ಕಂಡು ಮರಂದನೆಂದವನ ।
ಲ್ಕಾಡಿವಂತೆ ಮತಿ ವಕ್ತ್ರಪಂಕಜಂ ॥
ಬಾಡಿವಂತೆನಗೆ ತೋಱಿದಪ್ಪುದ ।
ಲ್ಲಾಡಿತೆಂತೊ ಹೃದಯಂ ಮಹೀಶನಾ ॥ ॥೧೮॥

ಪಾ— 1 ಗುಹೆಯುಂ. ಚ॥ 2 ಮುಣ್ಡಿಂ ಗ॥ 3 ನಸು. ಚ॥

ಬಗೆಯುಂ ಕಣ್ಣುಂ ಕರಂ ಕೆಯ್ಮಱಿದುವು ಮೊಗರಾಗಂ ಮೊಗಂಗೊ
ಟ್ಟುದಿಲ್ಲಿಃ । ಮೊಗದಂದಕ್ಕೆಂದಿನಂತಲ್ಲಿದು ನೃಪನ ತೆಱಂ ಸೌಷ್ಠವಂ ಮೆ
ಯ್ದುಳಂ ಮೆ ॥ ಯ್ದೆಗೆದತ್ತಾಳಾಪಮುಂ ಮೇಳದ ವಧುವಿರೊಳಂ ಕೇಳಲಾ
ಯ್ತಿಲ್ಲ ಸುಯ್ ಕೈ । ಮಿಗೆ ಘ್ರೋಣ್ಮುತ್ತಿರ್ಪುದಂ ಪೇೞ್ದಪುವು ಪೊಡರ್ವ* ಹೃ
ತ್ಕಂಠನಾಸಾಪುಟಂಗಳ್ ॥ ॥೨೦॥

ವ॥ ಅದಲ್ಲದೆಯುಂ,

ತಾಂಬೂಲೀದಳಕೆಂದು ಕ ।
ರಾಂಬುಜಮಂ ಬೀಱದೊಂದು ದೆಸೆಗುಯ್ದಪನೊ ॥
ತ್ತಂಬದೆ ನುಡಿಯಿಪರಂತಿರೆ ।
ತಾಂ ಬಱದತ್ತೊಂದು ದೆಸೆಗೆ ಕಿವಿಯೊಡ್ಡಿದಪಂ ॥ ॥೨೧॥

ಕಱುಕೆ ತವೆ ಮಱುಗಿ ಮೊಗಮಂ ।
[1]ಮು[1]ಱುಕುವ ಮೃಗಶಿಶುಗೆ ಕರದ ತಂಬುಲದೆಲೆಯಂ ॥
ಮಱೆದಿತ್ತಪನದುಮಲ್ಲದೆ ।
ಬಱಿಗಯ್ಯಂ ನೀಡುತಿರ್ದಪಂ ನೃಪತಿಲಕಂ ॥ ॥೨೨॥

ಕಡುನೊಂದುದೆನ್ನ ಚಿತ್ತಂ ।
ನಡೆ ನೋಡೆಂದೆನಗೆ ತೞೆದು ತೋಱುವ ತೆಱದಿಂ ॥
ದಡಿಗಡಿಗಾಗುಳಿಸಿದಪಂ ।
ತೊಡರ್ದಲಸಿಕೆ ನೆಲಸಿ ನಿಂದ ಕಾರಣದಿಂದಂ ॥ ॥೨೩॥

ಕೋಗಿಲೆಯು ಗಿಳಿಯು ತುಂಬಿಯು ।
ಸೋಗೆಯು ಸೊಗಯಿಸುವ ಸಣ್ಣ ದನಿಗಳ್ ಕಿವಿಯಂ ॥
ತಾಗಲೊಡಂ ಪೆಳಱಿದಪಂ ।
ಪೋಗಿದು ಕುಸುಮಾಸ್ತ್ರನಾಟವಾಗಲೆವೇೞ್ಕುಂ ॥ ॥೨೪॥

ಈರೂಪೀನವಯವ್ವನ ।
ಮೀರಸಿಕತೆಯೀಸ್ವಭಾವಮಂಧುರತೆ ಮಚ್ಚಿ ॥

ಪಾ— 1 ಕು. ಗ॥ ಚ॥

ದಿರ್ದೀರಾಜಪುತ್ರನಿರೆ ಮ ।
ತ್ತಾರೊಳ್ ಮೆಱೆವನೊ ಮನೋಜನಾತ್ಮೋದಯಮಂ ॥ ॥೨೫॥

ಆರಱಿವಂ ಮೆಱೆವಪರಿ ।
ನ್ನಾರಾರ್ ಸೌಭಾಗ್ಯಗರ್ವದಿಂ ಬೆಕ್ಕರಿಪರ್ ॥
ಮಾರಂ ಮುನಿದವರೆರ್ದೆಯೊಳ್ ।
ಕೂರಂಬಂ ತೆಗೆಯುವೇಕೆ ಕಡೆಗಣಿಸಿಪರ್ಗಂ ॥ ॥೨೬॥

ಪುರುಳಂ ಮರುಳಂ ಮಾಳ್ಪಂ ।
ಶರನಿಧಿಯುಂ ಬೆಂಚೆಮಾಡುವಂ ಕೇಸರಿಯುಂ ॥
ನರಿಮಾಳ್ಪನಣಕವಲ್ಲಿದು ।
ವರಸಲ್ಲನೆ ಕಾಮಿಜನಕೆ [1]ಕುಸುಮ[1]ಪತಾಕಂ ॥ ॥೨೭॥

ಫುಲ್ಲಶರಾಳಿಗೆ ಪೂವಿಂ ।
ಮೆಲ್ಲಿದುವಂ ಮನಮನಱಿಸಿ ಗುಱಿಮಾಳ್ಪಂತೇಂ ॥
ಬಲ್ಲನೆ ಮನೋಜನಾತಂ ।
ಕಲ್ಲೆರ್ದೆಗಳನೆಚ್ಚು [2]ಮುಸ್ಟ[2]ಮಾಡಲ್ ಮರುಳೇ ॥ ॥೨೮॥

ವ॥ ಎಂದು ನಿರೂಪಿಸಿ,

ಕುಸುಮಶರಹತಿಗೆ ಹೃದಯಂ ॥
ಪಿಸುಟ್ದುವೋಲ್ ತೋಱಿದಪುದು ದುಸ್ಸಹತಾಪ ॥
ಕ್ಕಸದಳವೊಟ್ಟಿದ ಚಂದನ ।
ರಸಕರ್ದಮವೊಣಗಿ ಬಿರಿದು ಭೂಭುಜನೆರ್ದೆಯೊಳ್ ॥ ॥೨೯॥

ಪೊಳೆವಿಂದೂಪಳರುಚಿಗಳ್ ।
ಬಳಸಿ ನೃಪಾತ್ಮಜನನಂಗಜನ್ಮನ ಬೆಸದಿಂ ॥
ಬೆಳಪ ಶಶಿ ಕಾಪ್ರವೇಶ್ದೊಡೆ ।
ಬಳಸಿದ ಬೆಳ್ದಿಂಗಳಂತಿರೇಂ ತೊಳಗಿದುವೋ ॥ ॥೩೦॥

---

ಪಾ— 1 ಮಕರ. ಕ॥ 2 ಮೊಟ್ಟೆ ಕ॥ ಗ॥ ಚ॥

ಇನಿತೊಂದುದ್ದಾಮಸೌಭಾಗ್ಯದಗುಣದೊಳವಿಂಗಾವಳೋ¹ನೋಂತಳಾವ¹ |
ಳ್ವನಿತಾನಿಷ್ಪಾದನಕ್ಕುಜ್ಜ್ವಪೆಣೆವಡೆವಳೋ ಪದ್ಮಜಂಗಾವಳೋ ಪೇಳ್ |
ನನೆವಿಲ್ಲಂ ಪುಡುವಾಯಾಸಮು²ನುಡುಗಿ²ಸಿದಳ್ಕಾವನಿಂದಾರುವಂ ರೂ |
ಪಿನೊಳಿಂದುಂ ಮೆಚ್ಚದಿರ್ಪನ್ನೃಪಸುತನೆಸಕಕ್ಕಾವಳೋ ಕೇತುವಾದಳ್ ||

ಸವಿಯುಂ ³ನೋಟ³ದೊಳಿತ್ತಳ್ಕುಮವಳಂ ಲಾವಣ್ಯಸರ್ವಸ್ವದಿಂ |
ಸವೆದಂ ಪದ್ಮಜನಕ್ಕುಮಾಕೆ ಸೊಬಗಿಂಗುತ್ಪತ್ತಿಯುಕ್ಕಂ ಮನೋ ||
ಭವನಾಕಾಂತೆಗೆ ವೇಳೆಗೊಂಡು ಬೆಸನಂ ಪೂಣ್ದಿರ್ಪನಕ್ಕುಂ ಮರು |
ಳ್ದವನಿಂತಲ್ಲದೊಡೇಕೆ ಸೇದಿವಡು⁴ಗುಂ⁴ ಶೃಂಗಾರಕಾರಾಗೃಹಂ ||೭೦||

ವ|| ಮತ್ತಮಿದೆಂತಾದುದೆಂದು ಬಗೆದು ಭಾವಿಸಿ ನೋಡಿ,

ಅನುರಾಗಂ ತಳೆದೋದುಗುಂ ಶ್ರವಣದಿಂದಾಲೋಕದಿಂ ಪೇಳ್ವುದಾ |
ವನುಮಿಲ್ಲೀತನ ಕಣ್ಗೆ ಪರ್ಪ ವಧುವುಂ ಮುನ್ನಿಲ್ಲ ಮುನ್ನೇಸರೋ ||
ಟ್ಟನೆಗಂ ತಳ್ವದ⁵ನಿಂ⁵ದು ಸಜ್ಜನನೆಯೊಳ್ಪೋ ಕೂಡನಕ್ಕುಂ ಪರಾಂ |
ಗನೆಯುಂ ಸ್ವಪ್ನದೊಳಿಂದನೀಂ ಸಚಿವಪುತ್ರಂ ನೀತಿನಿಷ್ಣಾತನೋ ||೭೧||

ವ|| ಅಂತು ವಿಶದಪ್ರಜ್ಞಾಪ್ರದೀಪದಳಿತನುನಸ್ತಮಸ್ತೋಮನಾಗಿ ದವ ದಹನದಗ್ಧಧರಾಧರಕ್ಕೆ ಅಭಿನವಜಳಧರಮುಂ ತೀವ್ರತಪನತಾಪತಪ್ತತರುಣ ತರುತಿಳಕಕ್ಕೆ ತೆಂಕಣ ಗಾಳಿಯುಂ ಬರ್ಪಂತೆ ಬಂದು ವಿಜಯಸ್ವವಚನ ಮನುಚ್ಚರಿಸಿದ ಮಕರಂದನಂ ಗುಣಮಕರಂದಮಧುಕರಂ ಕೆಲಕ್ಕೆ ಕರೆ ದುಕುಳ್ಳಿರಿಪುದುಮಾಮಂತ್ರಿಪುತ್ರನ ಕಣ್ಣಿಡಿದು ವಿಳಾಸಿನೀಜನಂ ⁶ಕಾಮ⁶ ಸಂಚಾರಚಕ್ಷಲದಿಂ ತೊಲಂಗೆಯುಂ ವೇತ್ರಲತಾಧರರ್ ದೂರಾಂತರದೊಳ್ ತಿರ್ಯಗ್ವಳಿತವದನರಾಗಿ ಗುಜುಗುಜುಗೊಳುತ್ತಿರೆಯುಮರಸನುಮಾತನ ಮೊಗಕ್ಕೆ ನಾಣ್ಚಿ ತಲೆಯುಂ ಬಾಗಿ ಬಿನ್ನನಿರೆಯುಂ ಕಿಱಿದು ಬೇಗಮಿರ್ದು||

ಅಳವಿಗೞಿದಳರ್ಕೆ ಮದನಾ |
ನನಂ ನದಿಪಲ್ಕಿ ⁷ಪಲವುಮ⁷ಮೃತದ ಪಸಿಯುಂ ||

ಪಾ— 1 ಕೇತುವಾದ. ಚ|| 2 ನೊದಪಿ ಚ|| 3 ನೇಹ ಗ|| 4 ವಂ ಚ|| 5 ನೆ ಗ|| 6 ಸಾಮ. ಕ|| ಚ|| ಗ|| 7 ಪಯುಮನ. ಕ|| ಚ||

ತಳ್ವಂತೆ ದಂತರುಚಿಗಳ್ ।
ತುಳುಂಕೆ ನೃಪಸುತನನಾರ್ಯಸುತನಿಂತೆಂದಂ ॥೩೫॥

ವರವಿದ್ಯೆ ರಾಜವಿದ್ಯಾ ।
ವಿರಿಂಚನನಿಸಿಪರ್ ನಿನಗೆ ನೀತಿಯ ಮಾತಂ ॥
ವಿರಚಿಸಿ [1]ಪೇಟ್ವುದು[1] ತುಂಬಿಗೆ ।
ಪರಿಮಳವಂ ಕೊಂಡು ಕೊನೆದು ಪೇಟ್ವವೊಲಕ್ಕುಂ ॥ ॥೩೬॥

ನೀಂ ಸಹಜಬುದ್ಧಿಯೈ ನಿ ।
ನ್ನಂ ಸಮಱುವೆನೆಂಬನಾವನಖಿಳನೃಪಾಲೋ ॥
ತ್ತಂಸ ಪಯೋರಸದಿಂಪಂ ।
ಹಂಸಂಗುಪದೇಶವಿಾನ ಗಾಂಪನುಮೊಳನೇ ॥ ॥೩೭॥

ಆದೊಡಮುಱಿಪಿದಪೆಂ ನಯ ।
ದಾದಲೆಯಂ ನಿನಗೆ ನಳಿನವಿಕಸನದೊಳ್ ಸೂ ॥
ರ್ಯೋದಯಕೆ ಸಹಾಯತ್ವಮ ।
ನೂದುವ ತಣ್ಣೆಲರುಮಲಸದೇಂ ಪುದುವುಗದೇ ॥ ॥೩೮॥

ಅಯನಯಪರನೆನಿಸಿದ ನಿ ।
ನ್ನಯ ದೆಸೆಯುಮನವರವಾನುಷವ್ಯಸನಂಗಳ್ ॥
ನಿಯತಂ ಪೊರ್ದವು ಪಿಜಿತೇಂ ।
ದ್ರಿಯನಂ ನಾಂಟುಗುಮೆ ಕಾಂತೆಯರ ಕಡೆಗಣ್ಗಳ್ ॥ ॥೩೯॥

ನನ್ನಿ ವಿನಯಂ ನಯಂ ಜಯ ।
ಮುನ್ನತಧೃತಿ ಸತ್ವಮೆಂಬ ರಾಜಗುಣಂಗಳ್ ॥
ನಿನ್ನೊಳ್ ನೆಲಸಿದುವಿನ್ನುಂ ।
ಮುನ್ನಂ ನಿನ್ನನ್ನರೊಳರೆ ರಾಜಕುಮಾರಾ ॥ ॥೪೦॥

ಬಯಸಲ್ ತಕ್ಕಂ[2]ದದ[2] ಬ ।
ರ್ದಿಯರೊಲವಿಂ ಬಯಸಿ ಬಂದೊಡಂ ಬಗೆಯದ ಬ ॥

---

ಪಾ— 1 ಪೇಚ್ವೊಡೆ. ಕ॥ 2 ಕದ. ಕ॥

ಲ್ಮೆಯನುಳ್ಳ ಸುಭಗನೈ ನೀಂ ।
ಒಯುಸಲ್ ಮಾನಿನಿಯರೊಳರೆ ಮಾನವಮದನಾ ॥ ॥೪೧॥

ಅನುರಕ್ತಂ ಪ್ರಕೃತಿ [1]ಪದಾ[1] ।
ವನತಂ ರಿಪುನೃಪಕುಲಂ ನಿಯೋಗಿನಿಕಾಯಂ ॥
ವಿನಯನಯನಿಪುಣಮೆನೆ ನೀಂ ।
ಮುನಿವ್ರೊಡಮೆಡೆಯಿಲ್ಲ ಸತ್ವಗುಣಮಣಿಜಳಧೀ ॥ ॥೪೨॥

ಅನುವಿಸಿ ಕರೆದಟ್ಟಿಗೆ ಸೊ ।
ರ್ಕಿನ ಸಿಂಧುರಮನಿಲಜವದ ವಾಜಿ ಪದಂಗಾ ॥
ಸಿನ ಪೊಂಗಳಲ್ಲದೀಯದ ।
ನಿನಗೆಂತುಂ ಲೋಭಮುಂಟೆ ದಾನವಿನೋದಾ ॥ ॥೪೩॥

ಸರಳಸ್ವಭಾವದಂಡಿತ ।
ದುರಾಗ್ರಹಗ್ರಾಹ ಸೂಕ್ತಿಮಣಿಮಯಕರ್ಣಾ ॥
ಭರಣ ಭವದೀಯಬುದ್ಧಿಗೆ ।
ಬರಲಱಿಗುಮೆ ಮಾನಮುರ್ಱ ಮಾನಿತಸುಜನಾ ॥ ॥೪೪॥

ಸೊರ್ಕಿನೊಡನ್ಹಟ್ಟೆಯುಂ ಸಿರಿ ।
ಸೊರ್ಕಿಸಲಾಱದೆನೆ ಸೊರ್ಕುಗಿಡಿಸುವ ಪೆಂಪಿರಂ ॥
ಸೊರ್ಕಿಸುವಱಿವುಂ ರೂಪುಂ ।
ಸೊರ್ಕಿಸಲಾರ್ತಪ್ಪವೆ ನಿನ್ನನುನ್ನತನಿಳಯಾ ॥ ॥೪೫॥

ಪಿರಿದುಂ ಹರ್ಷಂ ಧರೆಗು ।
ಬ್ಬರಿಸಿರೆ ಸಿರಿಗರಸನೆನಿಸಿದೈ ನೀಂ ಪೆಂಪಿರಂ ॥
ದೊರೆಗಿಡಿಪ ಕೇಡನೊಡರಿಪ ।
ಹರಿಸಂ ಬೆರಸುವುದೆ ನಿನ್ನನುತ್ತಮ[2]ಸತ್ವಾ[2] ॥ ॥೪೬॥

ಅದಱಿನೊಳವಗೆಗಳಾಱುಮ ।
ನದಿರ್ಪಿದೈ ದೇವ ಮಗುಳ್ದಿ*ಮವು ಕೂಡದವೊಲ್ ॥

ಪಾ— 1 ಪರಾ. ಕ॥ ಗ॥ ಚ॥ 2 ಪುರುಷಾ. ಗ॥; ಚಿತ್ತಾ. ಚ॥

[1]ಪದುಳಿಗ[1]ನಪ್ಪುದು ತಪ್ಪಿದೊ ।
ಡವಱಿಂ ಪಿರಿದಪ್ಪ ದೈನ್ಯಮಾವುದುಮುಂಟೇ ॥ ॥೪೭॥

ಅರಿಷಡ್ವರ್ಗಮನೆಯ್ದೆ ಮುೞ್ಗಿಸುವವಂ ಕಾಂತಾರತಾಸಕ್ತನಾ ।
ಗಿರೆ ಕೆಟ್ಟಿರ್ಕುಮದಾದೊಡಂದೆ ಮೊದಲೊಳ್ಕೈಯ್ಯೆತ್ತುಗುಂ ಕಾಮಮು ॥
ಬ್ಬರಿಕುಂ ಕ್ರೋಧಮಿದಿರ್ಚೆ ಚಪ್ಪರಿಸುಗುಂ ಲೋಭಗ್ರಹಂ ಮಾನಮಾ ।
ವರಿಸಿರ್ಕುಂ ಮದಮುರ್ಬೆ ಮುಂದುಗಿಡಿಕುಂ ಹರ್ಷಂ ಮರುಳ್ಮಾಡುಗುಂ ॥

ನೀಱೆಯರ ನಿಡಿಯ ಕಡೆಗ ।
ಣ್ಣೋಱಿಂದೆರ್ದೆ* ಬಿರಿಯೆ ಬೞಿಕಮಲರಂಬುಗಳಿಂ ॥
ಮೀಱಿ ಮಿಳಿರ್ದಿ*ಸದೆ ಮಸ[2]ಕ[2]ದೆ ।
ತೋಱದೆ ಮಾಣ್ದಪನೆ ತನ್ನ ಸೊಬಗನನಂಗಂ ॥ ॥೪೯॥

ಹರನುರಿಪಿದೊಡುರಿಪಮನೆ ।
ಲ್ಲರ ಮೆಯ್ಗಂ ಪಚ್ಚುಗುಡುವವೋಲ್ ಪ್ರಗುತಿಪಾರ್ ॥
ಸ್ಮರನಂ ಪುಗಲಿತ್ತೊಡೆ ಮನ ।
ಮುರಿವುದುಮಂಗಂಗಳುರಿವುದುಂ ವಿಸ್ಮಯಮೆ ॥ ॥೫೦॥

ಸರಸತಿ ಕೊರಗದ ವಿದ್ಯೆಯ ।
ಪರಹಿತಮೋಸರಿಸದಧಿಕಲಕ್ಷ್ಮಿಯ ಪಿರಿಮಂ ॥
ಪರವಶತೆ ಪೊಣ್ಮದೊಲವಿನ ।
[3]ಪರವರಿ[3]ಯಂ ಬಲ್ಲನುಳ್ಳೊಡಾತನೆ ಬಲ್ಲಂ ॥ ॥೫೧॥

ಪಾಟಱಿಯದ ಮನಮುಂ ಪೊಱ ।
ಮಾಱುವ ಸಕಳೇಂದ್ರಿಯಂಗಳಂ ಪ್ರಕೃತಿಯ [4]ನಿ ॥
ಟ್ಟೇ[4]ಱಿದ ಮದಾಂಧಗಜಮಂ ।
ಮೀಱಿ ಬರ್ದುಂ*ಕುವರುಮೊಳರೆ ಮಾನವಮದನಾ ॥ ॥೫೨॥

---

ಪಾ— 1 ಪದುಳಿದ ಗ॥ ಚ॥ 2 ಗ. ಚ॥ 3 ಪರವಶೆ. ಕ॥ ಗ॥ ಚ॥ ಜ॥
4 ಮಿದೇ. ಚ॥

ಫುಲ್ಲಶರನೆಸಕೆವಮುಂ ಹೃದ ।
ಯೋಲ್ಲಾಸಮುಮಿಂದ್ರಿಯಂಗಳಚ್ಚಿಯ ಸವಿಯುಂ ॥
ಸಲ್ಲದೊಡಂ[1]ತನ್ನಿಂ[2]ದವು ।
ಬಲ್ಲಿಮುವೆನಿಪೊಡವು[1]ಸಾರಮಿಾಸಂಸಾರಂ ॥ ॥೫೩॥

ಬಸವಾಗದೆ [3]ತಾನೆಂತು[3] ।
ಬಸದಾಗಿಸುವುದು [3]ಸಮಸ್ತ[3] ಪರಿಜನವಮುಮನೊ ॥
ಡ್ಡಿಸುವಿಂದ್ರಿಯವಿಸರವಮುಮಂ ।
ಬಿಸರುಹಮುಖಿಯುರುಮನಱಿವೊಡಿದೆ ಸಿದ್ಧಾಂತಂ ॥ ॥೫೪॥

ಉದಯಿಪ ನೇಸಱಿಂ ಕಿಡವ ಕತ್ತಲೆ ಕಿತ್ತಲಗಿಂ ಕಱುತ್ತು ಕು ।
ತ್ತದ [4]ಕಲಿ[4]ವೇನೆಯಂತಕನ ಬಾರಿಗೆ ಬಾರದ ಸಾವು ಕಳ್ತನು ॥
ಣ್ಣದ ಕಡುಸೊರ್ಕು ಕಿಚ್ಚಿನುರಿ ಪತ್ತದೆ ಪ್ರೊತ್ತುವ ಬೇಗೆ ಪಾವು ತಿ ।
ನ್ನದ ತನಿನಂಜು ತನ್ವಿಯರೊಳಾದಳುಪಿಂ ಪೆಱತುಂಟೆ ಲೋಕದೊಳ್॥೫೫॥

ಒದವಿದ ಪೆಂಪನೊಲ್ಲದೊಡೆ ನೀತಿಯನೊಲ್ಲದೊಡೋತ ಸ್ಯೆಪನೊ ।
ಲ್ಲದೊಡೆ ಜಸಕ್ಕೆ ಜವ್ವನಮನೊಲ್ಲದೊಡಾಯತಿಗಾದ ಪೆರ್ಚನೊ ॥
ಲ್ಲದೊಡೆ ವಿವೇಕಸಂಪದಮನೊಲ್ಲದೊಡೊಲ್ವರ ಪೇೞ್ದ ಮಾತನೊ ।
ಲ್ಲದೊಡೆ ಕುಲಕ್ರಮೋನ್ನತಿಯನೊಲ್ಲದೊಡೊಲ್ವುದು ಪೆಣ್ಗೆ ಮಾನವಂ ॥

ಅವ[5]ಸಂತೋ[5]ದ್ಧತಕಾಮುಮಶ್ರಮನಿಮಿತ್ತಾರೂಢಸಮ್ಮೋರ್ಛನಮ ।
ಶ್ರವಣಾಭಾವವಿಬದ್ಧಬಾಧಿರಮಸೀಧುಸ್ವಾದಿತಕ್ಷೀಬಮು ॥
ದ್ರವಿಣೋದ್ರೇಕವಿನಧೀರ್ತಾಂಧಿಮಮಪಂಕಕ್ಷೋಭಕಾಲುಷ್ಯಸಂ ।
ಭವಮೇನಲ್ಲವೆ ಮಾದ್ಯದಿಂದ್ರಿಯಗಜಕ್ರೀಡಾವನಂ ಯವ್ವನಂ ॥೫೭॥

ಅತನು ಗಡಾ ಭಟಂಗೆ ನನೆ ವಿಲ್ಲಡ ಪೂವೆ ಸರಲ್ಗಡಂ ಹಿಮ ।
ದ್ಯುತಿ ಗಡ ಬಂದ ಮಾವು ಗಡ ತೆಂಬೆಲರುಂ ಗಡ ತುಂಬಿಗಳ್ ಗಡಂ ॥

---

ಪಾ— 1 ಕಂದುವು ಮಿಗೆ ಬಲ್ಲಿದುವೆನಿಸಿದೊಡ ಕ॥ 2 ತನ್ನಿಂ ತಾಂ. ಚ॥
3 ಸುಮಿತ್ರ ಕ॥ ಚ.। 4 ತಲೆ. ಚ.। 5 ತಂಸೋ ಕ॥ ಗ॥ ಚ॥

ಲತೆ ಗಡ ಸೈನಿಕಂ ಗಡಮನಂಗೆ ಗಡಕ್ಕಟ ಪೋಲ್ತು ತಾಂ ಗಡು |
ದ್ಧತರುಮನಿಕ್ಕುವಂ ಗಡ ನೃಪಂ ಗಡ ಪೆಱಿದು ಕೇಳತಕ್ಕುದೇ ॥೫೮॥

ಅವಿವೇಕಂ ಮೃಗತೃಷ್ಣೆವೋಲ್ಪೊಳೆವಿನಂ ಗಾಂಭೀರ್ಯವಾರಾಶಿ ಬ |
ತ್ತುವಿನಂ ಧೈರ್ಯಧರಾಧರಂ ಬಿರಿವಿನಂ ವಿದ್ಯಾವನಶ್ರೇಣಿ ಪೊ ॥
ತ್ತುವಿನಂ ತಪ್ತಶರೀರಸೂರ್ಯಮಣಿಯಿಂ ಜ್ವಾಲಾಕಳಾಪಂಗಳು |
ಣ್ಮುವಿನಂ ಪೊಣ್ಮಿದುದೀಜಗತ್ತ್ರಯದೊಳಂ ಕಾಮೋಗ್ರಘರ್ಮಾಗಮಂ॥

ಅದನದಿರದೊವವಿ ಬೇಗಂ |
ಬೆದಱಿಸುವೊಡೆ ದಮಪಯೋಧರಾಗಮಮೆ ವಲಂ ॥
ಬೆದಱಿಪುದದಱಿಂ ನಯಕೋ |
ವಿದನೆನಿಪಂ ದಮನಸಮೇತನಾಗಲೆವೇಳ್ಕುಂ ॥ ॥೬೦॥

ವ॥ ಎಂದು ನುಡಿದ ಮಕರಂದನನುಮಾನದಿಂ ಮನದೊಳವಱ ಮನಱಿ ದುದಕ್ಕೆ ಮನದೊಳ್ ಬೆರ್ಚಿ ಬಸವಲ್ಲದ ಬೇವಸದ ಬಿಣ್ಪು ಪಸುಗೆವೋಗೆ ಲಾಘವಮನಪ್ಪುಕೆಯ್ದುಂ ತಿರಿಷದುನ್ಮಿಷಿತವದನಾರವಿಂದನಾಗಿ, ॥೬೧॥

ಮಂದಸ್ಮಿತಮಂ ಮೆಲ್ಲನೆ |
ಮುಂದೆ ಪಸಾಯಮನೆ ಕುಡುವ ತೆಱದಿಂ ಕಡೆಗ ॥
ಣ್ಣಿಂದಡರೆ ನೋಡಿ ನೃಪಸುತ |
ನೆಂದನುಪಾಲಂಭನಿಭಗಭೀರೋಕ್ತಿಗಳಂ ॥ ॥೬೨॥

ಏನೆಂದನ್ಯಪರೋಕ್ತಿಯಂ ಪರಪ್ರವೈ ಪೋ ಸಾಲ್ಗುಮಾಕಾರವಿ |
ಜ್ಞಾನಂ ನಿನ್ನೊಳ್ ನಿಂದುದಲ್ತೆ ಪೆಱನಾವಂ ನಿನ್ನವೊಲ್ಜಾಣ್ಬನೆ ॥
ನ್ನೀನಿರ್ವೇದಮನೋದಿನಿಷ್ಟದೊಳ್ ಪೊತುಂ ಬಳ್ಕೆಯಂತಲ್ಲದಂ |
ದಾನುದ್ಯಾನವಿಹಾರಖಿನ್ನನೆನದಂ ನೀನಿಂತಿರುತ್ತಾಪದಿಪ್ಪೈ ॥ ॥೬೩॥

ಎಂದುಸಿರದಿರೆ ನೃಪಂ ಮಕ |
ರಂದಂ ನಗುತೆಂದನಿಂಗಿತಜ್ಞತೆಯೆನ್ನೊಳ್ ॥

---

ಪಾ— 1 ವಸ, ಕ॥ ಗ॥ ಚ॥

ಕುಂದಿದುದೆ ದೇವ ನೀನೇ।
ನೆಂದೊಡಮಂತೆನಲೆವೇೞ್ಕುಮಾದೊಡಮೀಗಳ್ ‖ ‖೬೫‖

ಎನಗಱಿವುಂ ಬೇಱೊಲ್ಲಿತೊ।
ನಿನಗೆ ಮನಂಮಾಡಿ ನಡಪಿದ್ದೈ ನೀನೆನ್ನಂ ‖
ಮನವಱಿವುದಱಿ[1]ವೆ[1] ಮಱೆಯಿಸಿ।
ಮನಮಂ ಪ್ರೋಜಮಾಱಿ ಕಳೆವ ದೇವನುಮೊಳನೇ ‖ ‖೬೬‖

ಎನಗಿನಿಸೊಂ[2]ದುಮಂ[2] ಬೆಸಸದಿರ್ದೊಡನಂಗಜತಾಪಮಂ ಪಳ।
ಚ್ಚನೆ ಪಿಸುಣಾಡುತಿರ್ಪವಿಪ್ರೊಯ್ಯನೆ ನಿನ್ನಯ ಮೆಯ್ಯೊಳಾಱುವೀ ‖
ಪನಿಗಳುಮೆನ್ನುಮಂ ಸುಡುವ ಸುಯ್ಗಳುಮೀಬಿಸುಗಯ್ಯ ಪುಲ್ಗಳೊ।
ಯ್ಯನೆ ಪೋಗೆ[3]ತಂದು[3] ನಾಱೆ ಮೊಗಮಂಕೆಲಕುಯ್ವಮೃಗೀಮೃಗಂಗಳುಂ‖

ಆನಿದನಱಿಯಲೆ ನಿನಗಿ।
ತ್ತೀನಳಿನಮುಮುರಿಗೆ ತೊಱಸಿದಲರಂತೆ ಪರಿ ‖
ಮ್ಲಾನಮಿನಿತಾಯ್ತು ನೋಡಿದೆ।
ನೇನೆಂದೆಲೆ ಬಯಲ ಬಯಲೊಳಡಗಲ್ ಬಗೆವೈ ‖ ‖೬೭‖

ವ‖ ಎಂಬುದುಂ ಬಗೆಯ ಬೈಕೆಗೆ ನಾಲಗೆ ಪಿಸುಣನೆಂಬಂತೆ ಕುಸುಮ ಮಂ [4]ಮಱಿ[4]ದೀಡಾಡಿ ಕೇತದ ಕಂಪಱಿವ ಪೋಕೆಂಬಂತೆನ್ನಂ ಪಾಳ್ಗೆಯಿಂ ಬಳನೆನ್ನ ದೂತಿಗೆ ತೊೞ್ತುಮಾಡುವೆನೆಂಬರಸನಿಂತೆಂದಂ:— ‖೬೮‖

ಮದನಾಗ್ನಿಜ್ವಾಲೆಯೆನ್ನಂ ಸುಡುವನಿತುವರಂ ಬೇಡಬಲ್ಲಿ[5]ಗಾಂ[5]ಕೊ।
ವಿಗದ ಕಿರ್ಚುಗಂ ಗಾಳಿಯುಂ ಕೂಡಿದ ಮಸಕಮಿದೆಂಬಂತೆ ಕಾಲಾಗ್ನಿಯುಂ
ಕಾ ‖ ಣದ ಕಾಯ್ಪಂ ಕೊಂಡು ಚಂದ್ರದ್ಯುತಿಯುಮಲೆವ ತಣ್ಗಾಳಿಯುಂ
ಸುಟ್ಟಪುವೆಂದೆಂ। ಬುದನೆಂದಾಸ್ಯಾಬ್ಜ[6]ಮಂ ಸ[6]ಸ್ಮಿತಮನೊಱಗಿದಂ ಲಜ್ಜೆ
ಯಿಂ ರಾಜಪುತ್ರಂ ‖ ‖೬೯‖

---

ಪಾ— 1 ದೆ. ಕ‖ 2 ದನೀಂ. ಕ‖ ಚ‖ 3 ಗಂಡು. ಚ‖
4 ಮುಡಿ. ಕ‖ ಗ‖ ಚ‖ 5 ನಾಂ. ಕ‖ ಗ‖ ಚ‖
6 ಮಂದ. ಗ‖ ಚ‖

ವ॥ ಅಂತೊಡನೆ ದರಸ್ಮಿತಮುಖಂ ಮಕರಂದನಿಂತೆಂದಂ:-

ಮನದಪನ್ನನೆನಿಸುವೆನ್ನೊಳ್ ।
ಮಿನಿತುವರಂ ನಾಣ್ಚಲೇಕೆ ಮಿಥ್ಯಾಮೋಹ ॥
ಕ್ಕಿನಿವಿದು ವಿಕಳನಪ್ಪುದೆ ।
ಕನಸಿನ ಭತ್ತಕ್ಕೆ ಗೋಣಿಯಾಂಪರೆ ನೃಪತೀ ॥ ॥೨೦॥

ನಗೆಗೆಣೆ ಮಿಂಚಿನ ಗೊಂಚಲಂ ವಳಿ ತರಂಗಶ್ರೇಣಿಯಂ ವೇಣಿ ಕಾ ।
ರ್ಮುಗಿಲಂ ಭ್ರೂಲತೆ ಶಕ್ರಚಾಪಲತೆಯಂ ಬಿಂಬಾಧರಂ ಸಂಜೆಯಂ ॥
ಮಿಗೆ ಚಾಂಚಲ್ಯಮನಾಂತ ಕಾಂತೆಯರ ಸತ್ಯಸ್ನೇಹಮುಂ ಸ್ವಪ್ನದಂ ।
ತೆ ಗಡೆಂಬರ್ಬುಧರಂತದುಂ ಕನಸೆನಲ್ಕಾಮರ್ಚಿಪ್ಪುವನ್ಚಿಪ್ಪುವರ್ ॥ ೨೧॥

ವ॥ ಎಂದಿವು ಮೊದಲಾಗಿ ಪಲವುಂ ಪ್ರಸನ್ನಪುರುಷಪ್ರಾಯಂಗಳುಂ ಸ್ಮರಶರಪರಿಶ್ರಮಶಮಕರಂಗಳುಮಪ್ಪ ಹಿತಮಿತಪ್ರಚುರವಚನಂಗಳಿಂದ ಮುಂ ಪುರಾಣಪುರುಷಚರಿತಕೃತಕೌತುಕಕಥಾಕಥನಂಗಳಿಂದಮುಂ ಆಮಕ ರಂದನಾಮಹೀಪತಿಸುತನ ಮನಮಂನಾಱಿಸಿ ಪರಕಾಯಪ್ರವೇಶಂಗೆಯ್ವಂತೆ ಮನಕ್ಕೆ ಮನಮನಾಂಕೆಗೊಟ್ಟು ಮದಕರಿಯು ಮೇಗಣ ಬದಗನಂತೆ ಮೆ ಯ್ವಳಗೆ ಸಂದಳಕೆಗೊಳಿಸುವನಂತೆ ತನ್ನಿಚ್ಛೆಗೆ ತಂದು ಮತಿಯಂ ಮೊದಲ್ಗಿ ಡಲೀಯದೆ ಮದನವಿಕಾರಮನೊದವಲೀಯದೆ ಧೈರ್ಯಮಂ ದೂರಂಬೋಗ ಲೀಯದೆ ಮಜ್ಜನಭೋಜನತಾಂಬೂಲಭೂಷಣವಸನಕುಸುಮಾಂಗರಾಗದೊ ಳಂ ವಿರಾಗಮನಾಗಲೀಯದೆ ನೆೞಲಂತೆ ಬೞಯನುೞಯದೆ ಸುಕೃತದಂತೆ [1]ಸೋಂಕಿನಿಂ[1] ತೊಲಗದೆ ಶರೀರದಂತೆ ಸುಖದುಃಖಭಾಗಿಯಾಗಿ ತಾನೆ ಪರಮ ರಹಸ್ಯಭೂಮಿಯುಂ ಪರಮಮಿತ್ರನುಮಪ್ಪುದಂ ತಪ್ಪಿಲ್ಲದೆ ತೋಱ ತೞವು ಗುಡದೊಳಪೊಕ್ಕಳವಡಿಸಿ ಕಾದು ಕೊಂಡಿರ್ಪುದುಮೊಂದು ದಿವಸಂ ವಿ ದಳಿತಕಮಳಕೋಶಪರಿಮಳಮಜ್ಜನಾಮೋದಿತಮುಗ್ಧಮಯೂಖಾಗ್ರನಪ್ಪ ದಿವಸಕರನುದಯಿಸುವ ಸಮಯದೊಳ್ ಸಮುಚಿತಾಸ್ಥಾನನಾಗಿ ಕಂದರ್ಪ ಲೀಲೆಯಿಂ ಕಂದರ್ಪದೇವನಿರ್ಪುದುಮಾಪ್ರಸ್ತಾವದೊಳ್ ॥೨೦॥

---

ಪಾ— ಸೋಂಕಿಲಿಂ, ಚ॥

ಅಳನೀಲೀಕಂಚುಕಂ ದಳ್ಳಿಸೆ ಪೊಲೆಯಲೆಪಿಂ ಕಯ್ಯ ಸೋಂಕಿಂದೆ ಕೆಂಪಂ । ತಳೆದೊಪ್ಪಂಬೆತ್ತ ಪೊಂಬೆತ್ತದ ಸೆಳೆಗೆ ತಳವರ್ಮೊಡಿದಂತಾಗೆ ಪ್ರವಿಸ್ತಂ ॥ ಸೆಳೆಯುತ್ತುಂ ಗಾಡಿಯಂ ಸೋಡಿಯೆ ಮಿಡುಕಿಬೊಡಂ ನೇತ್ರವೇತ್ರಾಗ್ರದಿಂದ । ಪ್ಪೆಳಸುತ್ತುಂ ಸುತ್ತಿದುರ್ವೀಶ್ವರರನೆಸೆದು ಬಂದಳ್ ಪ್ರತೀಹಾರಿಯೊರ್ಬಳ್ ॥ ॥೭೩॥

ವ॥ ಅಂತು ಬಂದು ಕುಚಭರದಿಂ ಕುಸಿದು ಬೀೞ್ವಂತೆ ದೂರಾಂತರದೊಳ್ ಬಾಗಿ ಬೀಗಿ [1]ಬಳೆದಿವೊಲೆಗಳಿನಗೆಸೆಗುಡದೆ ನೂಂಕಿ ಕಳೆದಪ್ರವೆಂದು ಪುಯ್ಯಲ್ಚಿ ಮೆಯ್ಯನಿಕ್ಕುವಂತೆ ಮಣಿಹಾರಂ ಘಳಿಲನೆ ತಾಗಿ ಮಣಿಕುಟ್ಟಿಮದೊಳ್ ಕುಪ್ಪಳಿಸೆ ಪಿಡಿಪ್ರೂವನಿಕ್ಕಿ ಪೊಡೆವಡುವಂತಿರುಗುವೆರ್ಳಗು ಮುಂಚೆ ಕೆದಱೆ ಮಹೀತಳಸಿಹಿತಕರತಳೆಯಾಗಿ ಸವಿನಯದಿಂ ಮೆಲ್ಲನಿಂತೆಂದಳ್:—

ಜನಪತಿ ಬಿನ್ನಪಂ ಜಗದ ಮಾಯೆಗಿವಂ ತಲೆ ಕೌತುಕಕ್ಕಿವಂ ।
ಜನನಗೃಹಂ ಚಮತ್ಕೃತಿಗಿವಂ ಕಣಿ ವಿದ್ಯೆಗಿವಂ ವಿಧಾತ್ರನೆಂ ॥
ಬಿನಮದೆ ಮಂತ್ರಸಿದ್ಧಿಗಮರೇಂದ್ರನನಳ್ಳಱಿವಂತೆ ನೀಳ್ದಗು ।
ರ್ವಿನ ಗಡೆಯೆತ್ತಿ ಬಂದನವನೊವನೆ ಪೂರ್ವಿಗನಿಂದ್ರಜಾಲಿಗಂ ॥೭೫॥

ವ॥ ಬಂದು ದೇವ ದಾರವಟ್ಟದೊಳಿರ್ದಪನವನ ಪೆಸರ್ ಮಾಯಾಭುಜಂಗನೆಂಬಳ್ ಬಿನ್ನವಿಸೆ ವಸುಧಾವಲ್ಲಭನುಲ್ಲಸಿತಲೋಚನನಾಗಿ ಮಕರಂದನ ಮೊಗಮನವಲೋಕಿಪ್ರದುಮೂತನರಸನ ಕಣ್ಣಱಿದು ಕುತೂಹಳವುಳ್ಳೊಡೆ ಕಾಣಲಕ್ಕುಮಾಗಳೆ ಪುಗಿಸೆಂಬುದುಂ ಪೊಡೆವಟ್ಟು ಪೋಗಿ ಪಡಿಯಱಿತಿ ಪ್ರಗಿಸಿದಾಗಳ್ ॥೭೬॥

ತಿರಿಪುತ್ತುಂ ಕುಂಚಮಂ ಸೆಳ್ಳುಗುರೆಳವೆಳಗಂ ಸೂಸುತುಂ ಪಲ್ಲ ಮಿಂಚಂ।
ಪೆರಪುತ್ತುಂ ಭಾಳಬದ್ಧಾಕ್ಷತಮನಮರೆ ಪತ್ತೊತ್ತುತುಂ ಯೋಗಪಟ್ಟೋ॥
[2]ದರಮಂ[2] ಸೈತಿಕ್ಕುತುಂ ಕುಂಕುಮರಜನಿರಜೋರಂಜಿತಾಂಗಂ ಮದಪ್ರ ।
ಸ್ಫುರಿತಾಂ[3]ಕ್ಷಂ[3]ಬಂದು ಪೊಕ್ಕಂ ನೃಪಸಭೆಯನಹಂಕಾರಿ ಮಾಯಾಭುಜಂಗಂ॥

ಪುಲಿದೊವಲೆಸೆದುದು ಜೋಗಿಗೆ ।
ಸಲೀಲಗತಿಯಿಂದೆ ಬರ್ಪ ಪದದೊಳ್ ವಿದ್ಯಾ ॥

ಪಾ— 1 ಬಿಗಿ. ಚ॥ 2 ತ್ಕರಮಂ. ಖ॥ 3 ಗಂ ಕ॥

ಬಲದಿಂ ಹರನುಟ್ಟಿದುವಮಂ ।
ಸುಲಿದುಟ್ಟಭಿಮಾನಮವನೊಳಭಿನಯಿಸುವವೊಲ್ ॥　　　　॥೭೮॥

ಎಳಮಿಂಚನರೆದು ಸಣ್ಣಿಸಿ ।
ಬಳಿದಂತಿರೆ ತೊಳಪ ಮೆಯ್ಯೊಳಿರೆ ನೋಟ್ಪರ ಕ ॥
ಣ್ಬೊಳಿಯ [1]ನೆಟಿಲಿಂದ್ರ[1]ಜಾಲವು ।
ನಿಳಿಗಿಂದ್ರನೆ ತೋಱಲೆಂದು ಬಂದವೊಲೆಸೆಗುಂ ॥　　　　॥೭೯॥

ಜೋಗಿಯು ಕೊರಲೊಳ್ ಕರಮಿಂ ।
ಬಾಗಿರ್ದುದು ಪೊಳೆವ ಪೊನ್ನ ಪಟ್ಟಿಗೆ ನಿಜವಿ ॥
ದ್ಯಾಗರ್ವದಿಂದೆ ಮಿೞಸ ।
ಲ್ಪೋಗದ ಕುಡಿಮಿಂಚನಮರೆ ಮುಱಿದಿಕ್ಕಿದವೊಲ್ ॥　　　　॥೮೦॥

ತಳ್ಪೊಯ್ದ ಸಂಜೆಗೆಂಪಿನ ।
ತೆಳ್ಪ್ಪವರ್ದಿರೆ ಪೊರೆಯುನೆತ್ತಿ ಪೊಲಿಸಿದ ತೆಱದಿಂ ॥
ಮುಳ್ಪಿನ ಪೊಸ[2]ಟೊಪ್ಪ[2]ರಮಿನ ।
ಕಳ್ಪಂಗಾಜೋಗಿಗೆಸೆದುದಸವಳಮಾಗಲ್ ॥　　　　॥೮೧॥

ಆದಿತ್ಯನ ಮಂಡಲದೊಳ್ ।
ತೀದರಣನನಮರೆ ಬೊಟ್ಟನಿಟ್ಟಂತೆ ಬೆಡಂ ॥
ಗಾದುದು ಜೋಗಿಯ ನೊಸಲೊಳ್ ।
ಮೂದೆರೆಗೊಂಡೊಪ್ಪುವರುಣಚಂದನಗಂಧಂ ॥　　　　॥೮೨॥

ಸಿಡಿಲಂ ಕಿಱಿಕಿಱಿದಾಗಿರೆ ।
ಕಡಿದು ತೊಡಚಿರ್ದವೊಲಾತನೆಡಗಾಲೊಳ್ ಪೊಂ ॥
ದೊಡರಲೆದು ಘಣ್ಮುಘಳಿಲೆಂ ।
ದೊಡನಲೆದುದು ಮಲೆವ ರಿಪುಚಮತ್ಕಾರಿಗಳಂ ॥　　　　॥೮೩॥

ಮುಂಚೆ ಮಿಱುಮಿಱನೆ ಮಿಂಚೆ ಪ ।
ಳಂಚುವ ಪೊಱಮಡುವ ಪೊಳೆವ ಪಲ್ಗಳ ಪಲವುಂ ॥

ಪಾ— 1 ಬೆಳಗಿಂ. ಕ॥ 2 ವುಪ್ಪ. ಗ॥

ಗೊಂಚಲ್ವೆಳಗುಗಳಿಂದೆಳ ।
ಮಿಂಚಂ ಮುಕ್ಕುಳಿಸಿಯುಗು*ೞ್ವವೊಲ್ ಕರಮೆಸೆಗುಂ ॥ ॥೮೪॥

ಉಗುರಿಸಿ ಪೆಂಗೆ ಬಿಟ್ಟ ಪಿಣಿಲೊತ್ತಿದ ಬೈತಲೆ ಸಣ್ಣಪುರ್ಬುಗಳ್ ನು ।
ಪೊಸೆಗೆವ ಕದಂಪು ನೀಳ್ದಸಿಯು 'ಕಣ್' ಸೆಳೆಯೊಳ್ಪಡು ಪೀವರಸ್ತನಂ ॥
ಬಗೆವುಗೆ ಕಯ್ಯ ಸಿಪ್ಪ ಸೆಳೆ ಮೆಟ್ಟಿದ ಪಾವುಗೆ ತೊಟ್ಟ ಜೋಗವ ।
ಟ್ಟಿಗೆ ತೆಗೆದುಟ್ಟ ಸೋಗೆ ಕರಮೊಪ್ಪಿರೆ ಜೋಗಿಣಿಬರ್ಪಳೊಪ್ಪಿದಳ್॥೮೫॥

ಸೆಂದುರದ ಬೊಟ್ಟು ನುಣ್ಣನೆ ।
ಮಿಂದರಿಸಿನ ತರುಣಕುಸುಮದಾಮಂ ಕಿವಿಯೊಳ್ ॥
ಕೆಂದಾವರೆ ಬೈತಲೆಯೊಳ್ ।
ಕುಂದದ ಸೇಸಕ್ಕಿ ಸೊಗಯಿಕುಂ ಜೋಗಿಣಿಯಾ ॥ ॥೮೬॥

ಮುಡಿಯೊಳಿಪಿಲಿಕ್ಕಿದಸುಕೆಯ ।
ಕುಡಿವಳಿರಿಂದೆಸೆದಳಾಕೆ ಕೇಸುರಿಯಂ ಕೊಂ ॥
ಡುಡಿವ ಮುಡಿವಂತೆ ವಿದ್ಯಾ ।
ವಿಡಂಬಮಂ ತೋಱಲೆಂದು ತತ್ಸಭೆಗಾಗಳ್ ॥ ॥೮೭॥

ವ॥ ಅಲ್ಲಿಂ ಪೆಱಗೆ,

ಗರುಡನೆಱಂಕೆಯಂ ಮುಱಿವ ಕೆಂಬಿಸಿಲಂ ತಿಱಿದಿಂದುಬಿಂಬಮಂ ।
ಬರೆತೆಗೆದಿಟ್ಟು ಕಟ್ಟಿದವೊಲೊಪ್ಪಿರೆ ಸಿಂಗುರಿ ರಕ್ತಚಾಮರಂ ॥
ಸುರುಚಿರದರ್ಪಣಂ ತುದಿಯೊಳುತ್ಪಟಚಿತ್ರಪಟಂ ಬೆಡಂಗನಾ ।
ಳ್ದಿರೆ ಕಳಕಿಂಕಿಣೀಕ್ವಣಿತಮದ್ಭುತಮಾದುದು ಕೌತುಕಧ್ವಜಂ ॥೮೮॥

ಜಟಿಲಿತಕೇಶಂ ವೇಷ್ಟಿತ ।
ಪಟಚ್ಛಿನಂ ದೀರ್ಘದೇಹಿ "ಜಟ್ಟಿಗನೆಂಬೋಲ್[2] ॥
ಕುಟಿಲಗತಿ ಬರುತುಮಿರ್ದಂ ।
ಭಟನೊರ್ಬಂ ಪ್ರೊತ್ತು ಬೆಸುರುತುಂ ತದ್ಧ್ವಜಮಂ ॥ ॥೮೯॥

---

ಪಾ— 1 ಕ್ಯೆ ಕ॥ 2 ಜೊಟ್ಟಿಂಗನವೋಲ್. ಕ॥

ವ॥ ಅಂತು ಬಂದ ಮಹಾಯಾಭುಜಂಗಂ ಬಿರುದಿನ ಗಚೆಯುಂ ದೂರದೊಳರಿಸಿ ವಿದ್ಯಾಧರಿಯೆಂಬ ಜೋಗಿಣಿವೆರಸು ರಂಗಮಂ ಪೊಕ್ಕು ಕಟಿತಟನಿವೇಶಿತವಾಮಕರಕಂಜತಳಂ ಕುಂಚಿತಾಚಾರ್ಯನಚತುರಮಪ್ಪ ಸವ್ಯೇತರಹಸ್ತಮಂ ನಭಕ್ಕೆ ನೆಗಪಿ ॥೯೦॥

।. ಗಾ ಹೆ ।

ಪಣಮಹಮಹಿಂದಚಕಳಸೇ ಮಹಣಿಜ್ಜ ಕೋಮಾವಲ್ಲೀಣ ।
ಅಣ್ಣಾ ತಿಹುವಣಮಜ್ಝೇ ಸಂತೋಸೋವ್ವೋ ಸುಹಂ ಸಜ್ಝೋ ॥ ॥೯೧॥

ವ॥ ಎಂದು ಮಹೇಂದ್ರನಂ ಸ್ತುತಿಸಿ ಮಹೀಪಾಳಮುಖಕಮಳದತ್ತದೃಷ್ಟಿಯಾಗಿ ದೇವ ನೀನ ಪ್ಪಾಡೆ ನಿಖಿಳಕಳಾಕೋವಿದನೈ ಕೃತಾವಳೋಕಿತಕುತೂಹಳನೆಯುದಱಿಂ ನೀನಱಿಯದ ವಿದ್ಯೆಯಿಲ್ಲ ನೀಂ ಕಾಣದ ಕೌತುಕಮಿಲ್ಲ ನಿನ್ನೋಲಗಮಂ ಪ್ರಗದಿಂದ್ರಜಾಲಿಗನಿಲ್ಲಾದೊಡಂ ನಿನ್ನ ಚಿತ್ತಕ್ಕೆ ಚಮತ್ಕಾರಮಪ್ಪ ಚಮತ್ಕಾರಮಂ ತೋರ್ಪೆನೆನ್ನ ಪೆಮರ್ಗತಂ ಪೇಟಿಪ್ಪಾಡೆ ಮಂತ್ರದೊಳಾಜ್ಞಾಸಿದ್ಧನೆಂ ತಂತ್ರದೊಳ್ ಪ್ರಯೋಗಸಿದ್ಧನೆಂ ಯುಕ್ತಿಲಾಘವಮೆಂಬೆರಡಱೊಳಂ ಬೆಡಗುಗಿಡಟಿ ಪತ್ತಿವ ಬಗೆಯುಮಂ ಪರಿವ ಕಣ್ಣುಮಂ ಪೋಲಗಿಡದೆ ಪಿಡಿಮುಲೆನ್ನ ಬಿರುದಿನ ಗಟಿವಿಡಿವನ ಕೆಪರ್ಗಂ ಪಿಡಿದನೆ ಬಲ್ಲನಂತುಮಲ್ಲದೆ; ॥೯೨॥

ಉರಿಸ್ರವುದೋ ಪೊದಟ್ದುರಿಗಳಿಂ ಜಳಮಂ ತಿಮಿರಂಗಳಿಂ ದಿವಾ ।
ಕರನನಡುತುರ್ಗ ಬೆಂಕೊಳಪುದೋ ಮಣಿವಪರ್ಗಣಮಾಗೆ ಮಾಟ್ಪುದೋ ॥
ಪರಿಣತಚಂದ್ರನಂ ನಿನಗೆ ತಾರಗೆಯುಂ [1]ತರ[1]ದಿಂದೆ ಕೋವಳಂ ।
ಕರಿಸ್ರುದೊ ದೇವ ನಿನ್ನ ವನಿತಾಜನಪೀನಪಯೋಧರಂಗ[2]ಳಂ[2] ॥೯೩॥

ಜಳನಿಧಿಯುನೆಟಿಮ ತರ್ಪುದೊ ।
ಕುಲಗಿರಿಯನುರುಟ್ಟಿ ತರ್ಪುದೋ ನಭಕೆ ಮಹೀ ॥
ತಳಮಂ [3]ನೆಗೆಸ್ರುವುದೊ[3] ನಭ ।
ಸ್ಥಳಮುಮನಿಱಿಪುವುದೊ ಮಹಿಗಿದಕೇರ್ಗವೇಟ್ಕುಂ ॥ ॥೯೪॥

ಪಾ— 1 ತಳ. ಚ॥ 2 ಳೊಳ್. ಚ॥ 3 ನಿಱಿಪುವುದೊ. ಗ॥

ಮಿಗೆ ಗಟಿಪುವುದೇನೊಪ್ಪೋ |
ಲಗದೊಳ್ ದಿವಿಜೇಂದ್ರನಿರ್ಸ ವಿಭವನುಮಂ ಜೆ ||
ಲ್ಗೊಗೆವಮರೀಲಾಸ್ಯವುಮಂ |
ಗಗನದೊಳಾಂ ತೋರ್ಪೆನರಸ ನೋಡುವುದಿನಿಸಂ || ||೯೫||

ವ|| ಎನೆ ಸಾಭಿಪ್ರಾಯನಾಗಿ ಮಕರಂದಂ ನರೇಂದ್ರನಿಚ್ಛೆಯನಱಿದಿಂ ದ್ರನೋಲಗಮನೆ ತೋರ್ಪುದೊಪ್ಪುಗುಮೆಂಬುದುಂ;

ಗಗನಕುಸುಮಮನೆ ಪಡೆವಂ |
ತೊಗೆವುಗುರ್ಗಳ* ಬಿಳಿಯ ಬೆಳಗು ಬಳೆದಡರ್ದಿ*ರೆ ಕಂ ||
ಚಿಗೆಯನವಂ ಬೀಸಲೊಡಂ |
ಸೊಗಯಿಸಿದುದು ಭೋಂಕೆನಮರಪತಿಸಭೆ ನಭದೊಳ್ || ||೯೬||

ವ|| ಅಲ್ಲಿ ಶೈಶವದಶೆಯ ಪರಿಣಾಮದಶೆಯ ದೆಸೆಯುಮನಱಿಯದೇಱುಂ ಜವ್ವನಮನುೞಿ ಸೆ ಬೆವಿಡಿವ ಸುರಕಾಂತೆಯರ ಸರಸಕಿಸಲಯಸ್ನಿಗ್ಧ[1]ಸುಕು ಮಾರ ಕರಚರಣಾರುಣಕಿರಣಜಲದಿಂ ಕಿಸುಸಂಜೆ ಪಸರಿಸಿದಂತೆಯುಮಾಕೆಗ ಳ ಲಾವಣ್ಯರಸಪ್ರವಾಹದಿಂ ಗಗನಗಂಗಾಪ್ರವಾಹಂ ಕವಿದಂತೆಯು ಮಾಕೆಗ ಳ ಪುಷ್ಪಮಂಜರೀಮಂಜುಳಪುಂಜಾಯಮಾನಪವನಖನಿಕಾಯದಿಂ ತಾರಾಗ ಣಂಗಳ್ ತೆಕ್ಕೆಗೊಂಡಿಱಿವಂತೆಯುಮಾಕೆಗಳ ಚಕಿತಚಕೋರಚಳವಿಳೋಚ ನವಿಳಸಿತಂಗಳಿಂ ಸಮುದ್ಧಾಮವಿಸ್ಯದ್ಧಾಮಂಗಳ್ ದಿಂಡುಗೆಡೆದಂತೆಯುಂ, ಆಕೆಗಳುನ್ನತನಿತಂಬದಲಘುಜಘನಸ್ತನವಿತಾನದಿಂದಮಾಗಸದ ಮಹತ್ವ ಮೋಸರಿಸೆಯುಮನೇಕನಾಕಿನೀನಿಕರಮಕುಟತಟಪ್ರಾಂತ ಪದ್ಮರಾಗಮಣಿ ಪ್ರಭಾಪಟಲದಿಂ ದಿವಸಕರಮರೀಚಿ ತೂಳ್ದೆ ಮಾಸಳಮಾಗೆಯುಮಿಂತಸದೃ ಶಸೌಂದರ್ಯಸಾರಶೃಂಗಾರಗೌರವ ಸಹಜಸಕಳೈಶ್ವರ್ಯಸಂಕರಸಂಕೇತ ಸ್ಥಾನಮೆನಿಸಿದಿಂದ್ರನಾಸ್ಥಾನಮಂ ನರೇಂದ್ರನಾಸ್ಥಾನಂ ಚಿತ್ರಿತಾಸ್ಥಾನದಂತೆ ವಿಸ್ಮಯಸ್ಮೇರಹೃದಯಮೆಮೆಮಿಡುಕದನಿಮಿಷದರ್ಶದಿಂ ತನಗನಿಮಿಷತ್ವ ಮಾದಂತಿರೆ ಮೆಯ್ಯಿಕ್ಕದೆ ಸಜ್ಜನಮಾಗಿಯುಮುದ್ಗ್ರೀವಮಾಗಿಯುಂ ನೋ ಡುತ್ತಿರ್ಪುದುಮಾಗಳರಸಂಗೆ ಸುಟ್ಟಿ ತೋಱಿ ಮಕರಂದನಿಂತೆಂದಂ:—

ಪಾ— 1 ಕುಸುಮ. ಚ.|

ಜನನಾಥ ನೋಡಿಪಂ ಶ ।
ಕ್ರನ ಸಭೆಯುಂ ತೋಱುವ್ರೊಂದು ನೆವದೊಳ್ ನವನಂ ॥
ದನವನಮಂ ತೋಱಿದಪ್ಪೆಲ್ ।
ಕೊನರ್ತಪುದು ಕೌತುಕಕ್ಕೆ ಕೌತುಕಮಾಗಳ್ ॥ ॥೯೯॥

ವ॥ ಅದೆಂತೆನೆ:—

ಒದವಿದ ಪಾದಪಪ್ರಕರದಂತವೆ ದೇವಸಮಾಜಮೊಪ್ಪಮಂ ।
ಕೆದಱಿ ಕವಲ್ತು ಪೂತ ಲತೆಯಂತದೆ ದಿವ್ಯವಿಳಾಸಿನೀಜನಂ ॥
ಪುದಿದ ಸಹಸ್ರಲೋಚನನ ಕಾಂತಿಗಳಿಂದಮೆ ಪೂತ ಪಾರಿಜಾ ।
ತದ ಮಹಿಜಾತಮಂತಧಿಕಮಾಯೆಸೆದಿರ್ದನೆ ದೇವವಲ್ಲಭಂ ॥ ॥೧೦೦॥

ಬಿಸುಪಂ ಬಿಸುಟ್ಟು ಜಲಜಲ ।
ನೆಸೆದಿರೆ ಜಡೆಗೊಂಡು ನಿಮಿರ್ದ* ಕೇಸುರಿ ಮೆಯ್ಯೊಳ್ ॥
ಪಸರಿಸೆ ಪೊಸದಳಿರಂ ಪೊ ।
ತ್ತುಸುಕೆಯು ಸಸಿಯಂತೆ ತೋಱುತಿರ್ಪನನಲಂ ॥ ॥೧೦೧॥

ಕಾಳಿಂದಿಯೊಳಗೆ ಪೊಳೆವೆಳ ।
ವಾಳೆಗಳೆನೆ ಪೊಳೆಯೆ ಹರಿಯ ಲೋಚನಜಾಳಂ ॥
ನೀಳತನುರುಚಿಯೊಳೆಸೆವ ತ ।
ಮಾಳದ ಪೊಳೆಯಂತೆ ತೋಱುವಂ ಯಮರಾಜಂ ॥ ॥೧೦೨॥

ತೊಳಪ ಕುಡುದಾಡೆಗಳ್ ಪೊಳೆ ।
ವೆಳವೆಱೆಗಳನಣಲೊಳಡಸಿದಂತಿರೆ ತೀಕ್ಷ್ಣಾ ॥
ತುಳವಮೂರ್ತಿ ಕೇದಗೆಯ ಕೋ ।
ಲ್ಬೆಳೆಯಂತಿರೆ ನಿರುತಿ ನಿರುತಮೇನೆಸೆದಪನೋ ॥ ॥೧೦೩॥

ಮಿಗುವರುಣಮಣಿಯ ಮೆಯ್ದುಡು ।
ಗೆಗಳಿಂ ಸುಕುಮಾರಕಾಯದಿಂ ಸುಗ್ಗಿಯ ಸಂ ॥
ಪಗೆಯ ಸಸಿಯಂತೆ ವರುಣಂ ।
ಬಗೆಗೊಂಡಪನೇಕಚಿತ್ತದಿಂ ನೋಡು ನೃಪಾ ॥ ॥೧೦೪॥

ಮಗೆಮಗಿಸುವ ಮಂದಾರದ ।
ಮುಗುಳ್ಗ*ಳನುಬ್ಬರಿಸಿ ಕವಿವ ನವಪರಿಮಳಮಂ ॥
ತೆಗೆದು 'ಮೊಗೆ'ದೊಟ್ಟಿಕೊಂಡೇಂ ।
ಸೊಗೆಯಿಸುವನೊ ಮಧುರಮೂರ್ತಿಯಿಂ ಪವಮಾನಂ ॥ ॥೧೦೫॥

ತೊಳತೊಳತೊಳಗುವ ಪೊಸಪೊಂ ।
ಗಳ ತೊಡವಂ ತೀವೆ ತೊಟ್ಟ ಮೆಯ್ಸಿರಿಯಿಂ ಕ ॥
ಣ್ಗೊಳಿಸಿದಪನಮಳಕುಸುಮೋ ।
ಜ್ಜ್ವಳಕೋಮಳಕರ್ಣಿಕಾರದಂತೆ ಕುಬೇರಂ ॥ ॥೧೦೬॥

ಕೆಂದಳಿರೆನೆ ನಿಡುಗೆಂಜಡೆ ।
ಮಂದಾಕಿನಿಯುಡ*ದರ್ಪ ಪೂತ ಮಲ್ಲಿಗೆಯೆನೆ ತಾಂ ॥
ಬಂದೆಳಮಾವಿನ ತೆಱದಿಂ ।
ದಿಂದುಧರಂ ಕುಸುಮಧವಳನೇನೊಪ್ಪಿದಪಂ ॥ ॥೧೦೭॥

ವ ॥ ಅಂತುಮಲ್ಲದೆ,

ಕುಳಗಿರಿಗಳಂತೆ ತುಂಗಾ ।
ನಳಯಮದನುಜಾಬ್ಧಿಪತಿಮರುದ್ಧನದೇಶರ್ ॥
ಬಳಸಿರೆ ಸಹಸ್ರನಯನಂ ।
ಚಳತಾರಕೆ ಮುಸುಱಿದಮರಗಿರಿಯವೊಲೆಸೆವಂ ॥ ॥೧೦೮॥

ವ ॥ ಅಂತುಮಲ್ಲದೆ,

ದಳಿತೋದ್ಯತ್ಪುಂಡರೀಕಂ ಕೊಳನವೊಳಚಳನ್ಮೀನಮಂಭೋನಿಧಾನಂ ।
ವಿಳಸತ್ತಾರಾಪರೀತಂ ಗಗನಮೆಸೆವವೋಲ್ ಬಾಸಿಗಂಗಟ್ಟಿ ಭಿನ್ನೋ ॥
ತ್ಪಳಮಂ 'ಮೇಗೊಟ್ಟಿ'ಕೊಂಡಂತಿರೆ ತೊಳಗೆಸಹಸ್ರಾಕ್ಷಿಗಳ್ನಾಡೆಯುಂಕ ।
ಣ್ಗೊಳಿಸಲ್ಕಾದಿರ್ಪಪಂ ನೋಡಮರಪರಿವೃಢಂ ವಿಶ್ವವಿದ್ಯಾವಿನೋದಾ ॥

ಜಿನಜನ್ಮಾಭಿನವಾಭಿಷೇಕದೊಳೆ ಮೆಯ್ಯಾಳ್ಸಿಲ್ಕಿ ಬಲ್ದೋರಪಾ ।
ಲ್ಪನಿಗಳ್ ಪೋಗದೆ ಪತ್ತಿದಂತೆಸೆವಿನಂ ದೃಗ್ಜಾಳಕಂ ದೇವದೇ ॥

ಪಾ— 1 ಮೊಗ. ಚ॥ 2 ಮೇಲೊಡ್ಡಿ. ಗ॥

ವನ ಮುಂದಾಡಿನನೊದು ಮಾಣದೆ ಪಯಃಕುಂಭಂಗಳಂ ಪೊತ್ತು ಜೊ ।
ಮ್ಮನೆಜೋಮೇಖಿಪತೋಳ್ಗಳಂನಿಮಿರ್ವ*ಪ್ರೋಲಿಂಪ್ರಂಸುರಾದ್ರೀಂಪ್ರದೊಳ್

ವ॥ ಅಲ್ಲಿಂಬಟಿಯುಮಾಬಲವಿರೋಧಿಯಂ ಬಳಸಿವಬಳಿಯರಂ ತೋಱ

ಊಡದೆ ಕೆಂಪು ಮೂಡಿವಡಿ ತಿರ್ದದೆ ಕೊಂಕಿದ ಪ್ರಬುರ್ ಪ್ರಾಗಳಂ ।
ಸೂಡದೆ ಕಮ್ಮಿತಾದ ಪುಡಿ ಕಾಡಿಗೆಯೆಚ್ಚದೆ ಕರ್ಪನಾಳ್ದ ಕಣ್ ॥
ಕೂಡದೆ ತಂಬುಲಂ ತೊಳೆಪ ಬಾಯ್ದೆಱೆ ತಳ್ಕಿನ ರಾಗಮೊರ್ಮೆಯುಂ ।
ಬಾಡದ ಬಣ್ಣಮಿಾಕೆಗಳೊಳಂದೊಡೆ ಬಣ್ಣಿಸಲಾಗೆ ಗೋಚರಂ ॥೧೧೧॥

ಹಿಮರುಚಿ ಲೋಕಮಂ ಬೆಳಪ ಬಿಂಕಮನಿಂದಱಿದಂ ಸಲೀಲಮಿಾ ।
ರಮಣಿಯರೊರ್ಮೆಯುಂ ಮುಕುರಮೊಂದು ನಿರೀಕ್ಷಿಸೆ ನೀಳ್ದ ಕಣ್ಗಳಂ ॥
ನಿಮಿರ್ದು* ಪೊದಟ್ದಿ ಪಜ್ಜಳಿಪ ಕಾಂತಿಗಳಾತನ ಬಿಂಬದಲ್ಲಿ ಸಂ ।
ಕ್ರಮಿಸಿದುವಲ್ಲಮಂದಿನಿತು ದೀಧಿತಿಗಳ್ ಶಶಿಗೆಂತು ಸಾರ್ದುವೋ ॥೧೧೨॥

( ದ್ರುತವಿಳಂಬಿತ ವೃತ್ತಂ )

ಸುರತತೀಶ್ವರನಂಗಮನೀಕೆಗಳ್ ।
ಸುರತತೀವ್ರತೆಯಿಂ ನತೆ [1]ನೋಡಲ್ಕೆ[1] ॥
ಸರಲ ಮಾಳ್ಕೆಯ ಕಣ್ಗಳ [2]ನಟ್ಟುವಿ[2] ।
ಸರಲಮಾನಸರಕ್ಷಿಗಳಂಬಿನಂ ॥ ॥೧೧೩॥

ಅವಧರಿಸಿ ನೋಡು ನೃಪಸುತ ।
ಕವಲ್ತು ಕಣ್ಬೆಳಗು ಬಳಸಿ ಬಳ್ವಳ ಬಳ್ದಿಱ ॥
ತ್ತುವ ಕತದಿನೆಮೆಯನಿಕ್ಕದೊ ।
ಡವರಿಯರೆಮೆಯಿಕ್ಕರೆಂಬುದಱಿಯದೆ ಲೋಕಂ ॥ ॥೧೧೪॥

ವನಿತೆಯರೊಳ್ ಸಾರಂ ಯೌ ।
ವನಮಾಯೌವನಮೆ ತಮ್ಮೊಳೊಡಮ್ಬಟ್ಟ ರಸಾ ॥
ಯನಸಿದ್ಧಿವಡೆದುದೆನಲಿಂ ।
ಮನೋಜಸುಖರಸರಸಾಯನಂ ಪೆಱತುಂಟೇ ॥ ॥೧೧೫॥

ಪಾ— 1 ನೋಡಿದ್ದೈ ಚ॥ 2 ನಟ್ಟೊಡೀ ಗ॥

ಇಲ್ಲಿ ಯುವತೀರಸಾಯನ ।
ಮೊಲ್ಲದೆ ಸುರಸುಖಕೆ ಬಯಸಿ ಬಯಸಂ 'ಪಡೆ'ಮಾ ॥
ತಿಲ್ಲೆನಿಸೆ ತೊಱೆದ ತಾಪಸ ।
ವಲ್ಲಭರಱಿವರೆ ಸುರಾಂಗನಾವಿಭ್ರಮಮಂ ॥ ॥೧೧೬॥

ವ ॥ ಎಂದು ಮಕರಂದನರಸನ ವಿದ್ಯಾವ್ಯಾಮೋಹಮಹೇಂದ್ರಜಾಲದೊಳ್ ತೊಡರ್ದ ಮನಮಂ ಬಿಡಿಸಲುಂ ಮಱೆಯಿಸಲುಮೆಂದು ಮಹೇಂದ್ರಜಾಲದ ಶಿರ್ತಸುರಸದಸ್ಸುಂದರಿಯರ ರೂಪಾತಿಶಯಮಂ ನಿರೂಪಿಸಿ ಪ್ರೇಗಿಃತಿರ್ಪು ದುಮಾಗಳಲ್ಲಿ ॥೧೧೭॥

ದನಿಗೆಯ್ದುದು ಮಱೆದೊಱಗಿದ ।
ಮನಸಿಶಯುನನೆತ್ತುವಂತೆ ಭೋರ್ಗರೆದು ತಟ ॥
ನ್ನಿನದಮನೊಡನಡರ್ಮ* ಘನ ।
ಧ್ವನಿಯೆನಿಸಿ ಘನಾವನದ್ಧವಾದಿತನಿವಹಂ ॥ ॥೧೧೮॥

ವ॥ ಅಲ್ಲಿಂ ಬೞಿಯಿಂ

ಕಿಸುಸಂಜೆ ತೊಲಗೆ ತೊಳಗುವ ।
ಶಶಿಲೇಖೆ ಮಯೂಖನಿಕರಮಂ ಕೆದಱುವವೋಲ್ ॥
ಕುಸುಮಾಂಜಳಿಯಂ ತೆಱ್ಪಿನ ।
ಪೊಸಜವನಿಕೆ ತೊಲಗೆ ಪೊಳೆದದೇಂ ಕೆದಱಿದಳೋ ॥ ॥೧೧೯॥

ಕೆದಱಿ ಕರರುಹದ ರುಚಿಯಂ ।
ಕೆದಱಿದಳೆನೆ ಬಿಳಿಯ ಕಣ್ಣ ಬಂಬಲ್ವೆಳಗಂ ॥
ಕೆದಱಿ ನವಭಾವರಸಮಂ ।
ಕೆದಱಿದಳೆನೆ ಕುಣಿದು ರಂಭೆ ರಂಗಂಬೊಕ್ಕಳ್ ॥ ॥೧೨೦॥

ಆಂಗಿಕಮಸಾರಿಕೇಶಿಕೆ ।
ಸಂಗಳಿಸಿದ ಭಂಗಿ ಭಾವಮೊಪ್ಪಿಸಿದೊಪ್ಪಂ ॥
ಶೃಂಗಾರಮಿತ್ತ ನಯಮಮ ।
ರಾಂಗನೆಗಮರ್ದು*ದು ವಿಳಾಸಲಾಸ್ಯೋದಯದೊಳ್ ॥ ॥೧೨೧॥

ಪಾ— 1 ಗಡ. ಕ॥

ಅಂಗಮನಂಗನ ಜನಿಯಿಸು ।
ವಂಗಮುಪಾಂಗಮೆ ದನಂಗಜನ ಚತುರಂಗಂ ॥
ಶೃಂಗಾರಮೆ ನಿಗದಿಸ ।
ಪ್ತಾಂಗಂ ಪ್ರತ್ಯಂಗಮಾಸುರೇಂದ್ರಾಂಗನೆಯಾ ॥ ॥೧೨೨॥

ಎಲರಲೆಪದಿನೊಲೆದಾಡುವ ।
ಜಲರುಹಮೆನೆ ಭಾವರಸಮನೊದವಿಸಿತಾಸ್ಯಂ ॥
ಕೆಲಕೆ ನಸುಬಾಗುಸಂಚಿತ ।
ವಲೆಗುಂ ಮನಮೊಲೆವ ಲೋಳಿತಂ ಸಚ್ಛ್ರೋಣಿಯಾ ॥ ॥೧೨೩॥

ಆಚತುರಿಕೆಯಭಿನಯಿಸಿದ ।
ವಾಚಿಕಮಾಹಾರ್ಯಮಾಂಗಿಕಂ ಸಾತ್ತ್ವಿಕಮೆಂ ॥
ಬೀಚತುರಂಗಮೆ ತಾನಾ ।
ಯ್ತಾಚತುರಂಗಂ ಮನೋಜರಾಜಂಗಾಗಳ್ ॥ ॥೧೨೪॥

ದಳದಳಿಸಿರೆ ಮುಕ್ಕುಳಿಸಿದ ।
ಬೆಳರ್*ದಿಂಗಳನುಗುೞ್*ವ ನೆಯ್ದಿಲಲರ್*ಗಳ ಸಿರಿ ತ ॥
ಮ್ಮೊಳೆ ದಳ್ಳಿಸೆ ಬೆಳ್ವೆಳಗಮ ।
ರ್*ದೆಳಸುವ ಸುಸ್ನಿಗ್ಧದೃಷ್ಟಿಗಳ್ ಸುರವಧುವಾ ॥ ॥೧೨೫॥

ನಸುಮುಚ್ಚುವ ಬಿಚ್ಚುವ ಪ್ರೇಳೆ ।
ವ ಸುೞಿವ ಬಳಸುವ ಬಟಿಲ್ವ ತೆರೆಮಸಗಿ ಮರ ॥
ಲ್ದಿಸೆವ ರಸಭಾವದೃಷ್ಟಿಗ ।
ಳಸದಳಮೆನಿಸಿದುವು ನೃತ್ಯದೊಳ್ ನರ್ತಕಿಯಾ ॥ ॥೧೨೬॥

ಅತಿಶಯಶೃಂಗಾರರಸ ।
ಪ್ಲುತಚಳಕ್ಕೈವಾಳಲತೆಗಳೆನೆ ಸತಿಗೆಸೆಗುಂ ॥
ಚತುರೋತ್ಕ್ಷಿಪ್ತನಿಕುಂಚಿತ ।
ಪತಿತಸಮಭ್ರುಕುಟಿರೇಚಿತಭ್ರೂಲತೆಗಳ್ ॥ ॥೧೨೭॥

ಅತಿಲಲಿತಕರ್ಣಪತ್ರ |
ದ್ಯುತಿಲೇಖಾಲಾಸ್ಯಲಲಿತಮೇನೆಸೆದುದೊ ಕಂ ||
ಪಿತಘುಲ್ಲಪೂರ್ಣಸಮುಕುಂ |
ಚಿತಕಾಂತಕ್ಷಾಮಗಂಡಮಂಡಳಮವಳಾ || ||೧೨೮||

ಮುಕುಳಿಸಿತೆಲರೆಳೆಸಿದ ಚಂ |
ಪಕಮುಕುಳದ ಚೆಲ್ವನೆಸೆವ ಲಸಿತಸ್ವಾಭಾ ||
ವಿಕನತಮಂದೋಚ್ಛ್ವಾಸ |
ಪ್ರಕರ್ಷನಾಸಾವಿಳಾಸಮಾನರ್ತಕಿಯಾ || ||೧೨೯||

ಕಂದಿದಪುದಿದಱ ಕೆಂಪೆಂ |
ದೊಂದಿರೆ ಬೆಳ್ದಿಂಗಳಿಂದೆ ಬಾಸಣಿಸಿಗವ್ರೊಲ್ ||
ಸಂದ ನಿಜಾಧರಮೆಸೆದುದು |
ಸುಂದರದಶನಾಂಶುಧವಳಿತಂ ನರ್ತಕಿಯಾ || || ೧೩೦||

ನಸು ನಳಿಗು ನಿಮಿರೆ ತೋಳ್ಗಳ್ |
ಲಸಿತತ್ರಿಪತಾಕ ದಿಂ ಲತಾಕರಮೆಸೆಯಲ್ ||
ಪೊಸದಳಿರಂ ಪೊತ್ತೆಳಲತೆ |
ಮಿಸುಗುವ ಕುಡಿಯೆರಡನೆಟಿಲೆ ಬಿಟ್ಟವ್ರೊಲೆಸೆದಳ್ || || ೧೩೧||

ತೊಳಗುವ ನಗೆಮೊಗಮಿದು ನಿ |
ಮ್ಮಳವಲ್ಲದು ಬರ್ದಿರೆಮ್ಮುಮಂ ಪೋಲ್ತೊಡೆನು ||
ತ್ತೆಳೆಯಳ ಕನ್ನವುರದ ನವ |
ನಳಿನಮನಲೆವಂತೆ ಕರಿಕರಂ ಕರಮೆಸೆಗುಂ || ||೧೩೨||

ಗರ್ಭೇಶ್ವರಿಯ ಕುಚಂಗಳ್ |
ನಿರ್ಭರದಿಂದುರಮನೆಯ್ದೆ ಪರ್ಬಿರೆ ಸಮಸಂ ||
ದರ್ಭಾಹಿತಕಂಪಿತವರ |
ನಿರ್ಭುಗ್ನಾಭುಗ್ನವಕ್ಷಮೇಂ ವೃಥೆಯಾಯ್ತೋ || ||೧೩೩||

ವೃತ್ತಸ್ತನದೊಡನೊಡನ ।
ತ್ರಿತ್ತುಸುವರೆಯಾಗೆ ನೃಸುರನೇತ್ರಾಳಿ ಪರಾ ॥
ವೃತ್ತಾರೋಚಿತಕಂಪನಿ ।
ವೃತ್ತೋನ್ನತಸೆನನಿತಂಬಮೆಸೆದುದು 'ಸತಿ'ಯಾ ॥ ॥೧೩೪॥

ಸತಿ ಜಘನದ ಭರದಿಂದೇ ।
ಕತಲದೊಳಿರಲಱಿಯುವಗ್ರತಳಸಂಚಾರಾಂ ॥
ಚಿತಕುಂಚಿತಸೂಚ್ಯುದ್ಘ ।
ಟ್ಟಿತಮಂ ಪೞಿದಂತೆ ಪಾದಪಲ್ಲವಮೆಸೆಗುಂ ॥ ॥೧೩೫॥

ತಳೆಯೆ ಮೊಗಮೊಗೆಯೆ ನೆಲೆಮೊಲೆ ।
ಬಳೆಯೆ ಬಲಕ್ಕಲಘುಜಘನಮುಮುದಾರ್ಯತರಮಂ ॥
ಕೊಳುತುಮವಹಿತ್ಥಮಂ ಕೊಂ ।
ಡೆಳೆಯಳ್ ಸುರಸಭೆಯ ಮನಮಂ[1]ನಿಬ್ಬಿಳಿ[2]ಗೊಂಡಳ್ ॥ ॥೧೩೬॥

ತೀವಿ ಮೊಗರಸದೊಳೊವವಿವ ।
ಭಾವರಸಂ ಬಸಿಗುಮೆಂಬವೊಲ್ ಸಂಪತರಮಂ ॥
ಸಾವಗಿಸಿದ ಮೆಯ್ಯೊಳ್ ಶೋ ।
ಭಾವತಿ ಸಮಪಾದಚಾರಿಯಂ ಕೈಕೊಂಡಳ್ ॥ ॥೧೩೭॥

ಅಡಿವಳಿಗೆರ್ಗಳ್ ತಳರಂ ಸಾ ।
ಲಿಡುವಂತಿರೆ ಕೆಂಪು ಕೆಪಱಿ ಪವಪಲ್ಲವದೊಳ್ ॥
ತೊಡರ್ದಮರರ ಕಣ್ಬಲೆಯಂ ।
ಬಿಡಿಸುವ ತೆಱದಿಂದೆ ಚಾಪಗತಿಯಂ ಮೆಱೆದಳ್ ॥ ॥೧೩೮॥

ಉಗುವೆರ್ಗಳಗು ಬಿಣ್ಣಿತೆಂದದ ।
ನುಗುಟ್ವಿಂತಿರೆ ತೋಱುವಂತೆ ತಳೆದೆಳೆಗೆಂಪಂ ॥
ಬಗೆಗೊಳಿಸುವಡ್ಡಪ್ರರಿಯಂ ।
ಪ್ರಗುತುಂ ಪುರಿಯಂ ವಿಳಾಸವತಿ ಪೊಱಮಟ್ಟಳ್ ॥ ॥೧೩೯॥

ಪಾ— 1 ನಟು. ಗ॥ 2 ನೆಳಕುಳಿ, ಗ.

ಮೆಱೆಯೆ ಕುಚಕಮಂಡಲಂ ನಸು ।
ದೆಱೆಯೆ ನಿವೃತ್ತೋರುಮಂಡಲಂ ರಸದಿಂ ಮೆ ॥
ಯ್ಮೆಱೆಯೆ ಸಭಾಮಂಡಲಮೋ ।
ವೆಱೆದಳೊ ಮಂಡಲಮನಾಕೆ ಚಾರಿಗಳಿಂದಂ ॥ ॥ ೧೪೦॥

ಅರುಣಸರೋರುಹದಲರಂ ।
ಮುರಿಮುರಿದೀಡಾಡುವಂತೆ ನಿಟ್ಟಿಸಿ ನೋಡಲ್ ॥
ಕರಮರಿದೆನೆ ಕರಮಿವು ಸಾ ।
ಸಿರಮೆನೆ [1]ರೇಚಿಸಿ[1]ದಳಾಕೆಯೆಡಕಂ ಬಲಕಂ ॥ ॥೧೪೧॥

ಜತಿ ತೊಡರೆ ರಣಿತನೂಪುರ ।
ರುತಿಗಳ ಬೞಿವಿಡಿವ ವಾದಕಂ ಬಾಜಿಸಿದಂ ॥
ಧೃತದಾವುಜ್ಜಮುದಾರಸ ।
ವತಿಯುಂ ನೃತ್ಯಾಂಗಮೆಂಬೊಲಾಗಿರೆ ವಾದ್ಯಂ ॥ ॥೧೪೨॥

ಕರಣದೊಳೊಂದುಂ ಭಾರತಿ ।
ಕರಣಮಿದಂ ಮೆಚ್ಚರೆನಿಪುದಿಲ್ಲೆನೆ ಮೆಲ್ಪಿಂ ॥
ಪರಿವಿಡಿಯಿಂ ಪರಿಶೋಭಿಸಿ ।
ಪರಿವಿಡಿಯಿಂದಂಗರಾಗಮಂ ಪೊಸಯಿಸಿದಳ್ ॥ ॥೧೪೩॥

ಬತ್ತಿದ ಶೃಂಗಾರದ ರಸ ।
ದೊತ್ತೆನೆ ಕವಿತಂದು ರಸವ ಕವಿತೆಯ ನೆಲೆಯುಂ ॥
ಪೆತ್ತು ಜಡಿಯುತ್ತೆ ಶೋಭಿಸೆ ।
ವೃತ್ತಸ್ತನಿ ಲಾಸ್ಯಲೀಲೆಯಿಂ ಶೋಭಿಸಿದಳ್ ॥ ॥೧೪೪॥

ವ॥ ಮತ್ತಮೇಕಪಾದಸ್ಥಾನಮಂ ಕೈಕೊಂಡು ಅಲ್ಲಿ

ಚರಣಾಗ್ರಂ ಜಾನುವಂ ಜಕ್ಕುಲಿಸಡರೆ ನಿತಂಬಕ್ಕೆ ಪಕ್ಕಾಗಿ ಮಧ್ಯಂ ।
ಮುರಿವನ್ನಂ ದಕ್ಷಿಣಕ್ಕಮ್ವಳಿಸಿದ ಕುಚದೊಳ್ ಕೈದಳಕರ್ಣಡೆ ವಾಮಂ ॥

ಪಾ— 1 ರಚಿಯಿಸಿ ಚ॥

ಕರಕಂಜಂ ಕಾಂತಿಯಂ ತಳ್ತಳ್ದುರ್ದ್ ಮಿಳಿರೆ ವಕ್ತ್ರಾಂಬುಜಂ ಕೊಂಕಿ
ಚೆಲ್ವಾ । ಗಿರೆ ಕಾವೋತ್ಪತ್ತಿಯಂ ಕಾಮಿಸಿ ತರುಣಿ ತಪಂಗೆಯ್ವವೋಲ್
ಕಣ್ಗೆವಂದಳ್ ॥　　　　　　　　　　　　　　　　　　　　　॥ ೧೪೫ ॥

ವ॥ ಅದಲ್ಲದೆಯುಂ,

ಬಲಗಾಲ್ ಸೈತೊಪ್ಪೆ ವಾಮಂ ಕೆಲಕೆ ತೊಲಗೆ ವಕ್ಷಸ್ಸ್ಥಿತಂ ಮುಷ್ಟಿಚೆಲ್ವಾ ।
ಗೆ ಲತಾಖ್ಯಂ ಕೈ ಕರಂ ಕಣ್ಗೊಳೆ ನೆಗೆಯೆ ಕುಚಂ ಕೊಂಕೆ ಮಧ್ಯಂ ದಳತ್ಕು ॥
ಟ್ಮಲನೇತ್ರಂ ಬೀಱೆ ಬೆಳ್ಪಂ ಪ್ರಹಸಿತವದನಂ ಶೋಭೆಯಂ ಸೂಸೆ ಲೀಲಾ ।
ಲಲಿತಾಸ್ಯಕ್ರಾಂತದಿಂ ನಿಂದಮರನರಸಭಾಚಿತ್ತದೊಳ್ ಕಾಂತೆ ನಿಂದಳ್ ॥

ವಿವಿಧಾಲಂಕೃತಿ ಕೂಡೆ ಕೊಂಡ ಗಮಕಂ ಮಂದ್ರಾದಿಯುಂ ಮುಂದೆ ವ ।
ರ್ಣವಿಭಾಗಂ ಪಸಱಾಗೆ ರಾಗರಮಣೀಯಚ್ಛಾಯೆಯುಂ ಕೂಡೆ ನೀ ॥
ಡುವ ವೀಣಾಕಲಕೋಮಳಕ್ವಣಿತದೊಳ್ತಳ್ಪೊಯ್ದು ಕೈಗಣ್ಮೆ ಪೊ ।
ಣ್ಮುವ ಗೀತಕ್ಕೆ ಮೃಗಾಕ್ಷಿಯಾಡಿ ಮೆಱೆದಳ್ ಗೀತಾನುಗಪ್ರೌಢಿಯಂ ॥

ವ॥ ಅಂತು,

ಅಚ್ಚರಿಯ ನರ್ತನಂ ಬಗೆ ।
ಗೆಚ್ಚರಿಯಂ ಪಡೆಯೆ ನೃಪಸಭಾಸದರ ಮನಂ ॥
ಮೆಚ್ಚಿ ಮಱೆದೊಱಗೆ ಕಣ್ಗಳ್ ।
ಬೆಚ್ಚಂತಿರೆ ಮುಗುಳ್ದುವಿಲ್ಲ ವಿಸ್ಮಯದಿಂದಂ ॥　　　　　　　　॥ ೧೪೮ ॥

(ಖಚರಪ್ಲುತವೃತ್ತಂ)

ಇಂದ್ರನೀತನೆ ಮತ್ತಮಿವರ್ ದಿಕ್ಪಾಳರೆ ಪೋಳೆಯರೀಕೆಯರ್ ।
ಚಂದ್ರವಕ್ತ್ರೆಯರಗ್ಗದ ದೇವಸ್ತ್ರೀಯರೆ ನರ್ತಕಿಯೀಕೆ ದೇ ॥
ವೇಂದ್ರನಂ ಸಲೆ ಮೆಚ್ಚಿಸುತಿರ್ಪ ರಂಭೆಯೆ ಪೋ ಪುಸಿಯಲ್ಲದೆಂ ।
ದಿಂದ್ರಜಾಲಮನೀಕ್ಷಿಸಿ ಚೋದ್ಯಂಬಟ್ಟುದು ಭೂಪಸಭಾಜನಂ　॥ ೧೪೯ ॥

ಅಂತು ಸಹಸ್ರಲೋಚನನುಮಂ ಬಸದಾಗಿಪ ರಂಭೆಯಾಟಮುಂ ।
ಕಂತುವನಾದೊಡಂ ಮರುಳಿಸಲ್ ನೆಱೆವಗ್ಗದ ದಿವ್ಯಕಾಮಿನೀ ॥
ಸಂತತಿಯುಂ ಕುಮಾರನ ಮನಂಬುಗಲಾಱವೆ ಭಾವಿಪಂಗು ಪೇ ।
ಳೆಂ ತೆಱಪಾಗಲಾರ್ಕುಮೆ ಘನಸ್ತನಿ ಪೊಕ್ಕೆಡೆಗೊಂಡ ಚಿತ್ತದೊಳ್ ॥

ವ॥ ಅಂತು ನೋಡಿ ನರಪತಿ " ಸಚಿಂತನಚಿತ್ತೋಹಿ ತರುಣೀಮಣಿವಂ ತ್ರೌಷಧೀನಾಂ ಪ್ರಭಾವಃ॥ (?) " ಎಂಬಿನಿತನೆ ನುಡಿದಾದರಸ್ಪಂದಮಂದ ಮುದ್ರಾಮನೋಹರಂಗಳಪ್ಪ ಕಣ್ಗಳಂ ಕೆಲಕ್ಕೆ ತೆಗೆಯೆ ॥ ೧೫೧॥

ಅರಸನ ಮನಮೆಱಗೆದುದಂ ।
ನಿರುತಂ ಮಾಯಾಭುಜಂಗನಿಂಗಿತವಿದಿತಂ ॥
ಪರಿಭಾವಿಸಿ ಬಱಕದನುಪ ।
ಹರಿಸಿದನಾಯಿಂದ್ರಜಾಲಮಂ ತತ್ಕ್ಷಣದೊಳ್ ॥ ॥ ೧೫೨॥

ಎಂತು ನಭದಲ್ಲಿ ತೋಱಿವ ।
ನೆಂತು ಸಭಾಸದರ ಚಿತ್ತದೊಳ್ ಪುಗಿಸಿದನಂ ॥
ದಂತಮರರ್ ಬೆರಸಮರೀ ।
ಸಂತತಿ ಚಿಂತಾವಶೇಷಮಾದತ್ತಾಗಳ್ ॥ ॥೧೫೩॥

ಬೆರಲಂ ಮಿಡಿದು ಕದಂಪಂ ।
ಕರತಳದಿಂದಾಂತು ವಿಸ್ಮಯಸ್ಮಿತನೇತ್ರಂ ॥
ಬರುಹದಿನಾಮಾಯಾವಿಯ ।
ನರಸನ ಸಭೆ ನೋಡಿ ತಲೆಯನೇಂ ತೂಗಿದುದೋ ॥ ॥ ೧೫೪॥

ಮಕರಂದಂ ಜೋಗಿಗೆಂಗಂ ಕುತುಕಕಳೆಗಳಂ ಕೇಳ್ದುದಂ ಕಂಡೆವೀಕೌ।
ತುಕಮಂ ನಿನ್ನಿಂದಮಿನ್ನೊಂದೆಮಗೆ ಸಮನಿಸಿತ್ತೀಕ್ಷಣಾಪೇಕ್ಷೆ ನೀಂ ವ್ಯಾ॥
ಪಕನ್ಯೈ ಮೂಲೋಕದೊಳ್ ಮೇಲೆನಿಸುವ ವನಿತಾರತ್ನಮಂ ರಾಜವಂಶಾ ।
ಧಿಕಮಂ ನೀಂ ಕಂಡುದುಂಟಾದೊಡೆ ತಡೆದಿರವೇಂ ತೋಱು ಸಾಮರ್ಥ್ಯದಿಂದಂ॥

ವ ॥ ಎಂದ ಮಾತಿಂ ಮುನ್ನಮೆ ಮಾಯಾಭುಜಂಗಂ ಜೋಗಿಣಿಯ ಮೊಗಮಂ ನೋಡೆ

ಆಕೆ ಮನಸಿಜನ ವಿಜಯಪ ।
ತಾಕೆಯನೆತ್ತುವವೊಲೆತ್ತೆ ಚಿತ್ತಮನತನು ॥
ವ್ಯಾಕುಲೆಯಂ ತೋಱಿದಳಂ ।
ದಾಕನ್ನಿಕೆಯನೆ ನಭೋವಿಭಾಗದೊಳಾಗಳ್ ॥ ॥ ೧೫೬॥

ಬಿಸುಸುಯ್ಯಿಂ ನಸುಗಂದಿ ಬಾಡಿವಧರಂ ಕಣ್ಣೀರ ಬಾನಲ್ಗಳಿಂ ।
ಬಸಿವಾಸ್ಯಂ ತಳಗೆಯ್ಯೆ ಪಜ್ಜೆ ಪಸರಂಗೊಂಡಿರ್ದ ಗಂಡಸ್ಥಳಂ ॥
ಪೊಸವೆಳ್ಪಂ ಮಿಸುವಂಗಯುಷ್ಟಿ ನೊಸಲೊಳ್ ನೀಳ್ದಿರ್ದ ನೀಲಾಳಕಂ ।
ಪಿಸುಣಾಡಿತ್ತ ಸನೂಸ್ತ್ರನಸ್ತ್ರಹತಿಯಂ ತತ್ಕಾಮಿಸೀರೂಪಕಂ ॥೧೫೭॥

ವ ॥ ಅದಲ್ಲದೆಯುಂ,

ಅಲರ್ವಸೆಯೊತ್ತೆ ಪತ್ತಿ ದೆಸಳಿಂದೆಸೆವಂಗದ ಗಂದೆ ಗಂಧಶೀ ।
ತಲಜಲಬಿಂದುಗಳ್ ಕುಚದೊಳೊಟ್ಟಿದ ಚಂದನವೊದ್ದೆಗೆಯ್ದ ಶೀ ॥
ತಲಿಕೆಗಳೋಲೆಯೊರ್ದುಗುಲವಂಬುಜನಾಳದ ಹಾರವಾಕೆಯು ।
ತ್ಪಲವಲಯಂಗಳಿಂ ನೆಱೆಯೆ ಪೇೞ್ದುವೊ ತಚ್ಛಿಶಿರೋಪಚಾರವಂ॥೧೫೮॥

ವ॥ ಅಂತಾಕಾಂತೆಯ [1]ಕಂತು[2]ಸಂತಾಪಕ್ಕೆ [2]ಶಶಿ[2]ಕಾಂತವುಂ ನವನಿಶಿತ ಕಾಮಕುಂತನುಂ ಸಕಲತ್ರೈಲೋಕ್ಯಸಾರನುಂ ಶಿಶಿರೋಪಚಾರಚಾರು ಶೃಂಗಾರವುಮಪ್ಪತಿಶಯರೂಪಮಂ ಸತ್ಯಸ್ವರೂಪಮಂ ನೋೞ್ಪಿಂತಾಸ ಭಾಜನಂವಿಸ್ಮಯರಸಭಾಜನಮಾಗಿ ನೋಡುತ್ತುಮಿರೆ ॥ ॥೧೫೯॥

ನೆಗೆದು ಮದನಾಗ್ನಿ ಸುಡುತಿರೆ ।
ಮಿಗೆ ಸಿಡಿಮಿಡಿವಂದು ಬೆಂದು ತನ್ನಯ ಮನದಿಂ ॥
ದಗಿದು ಪೊಜಮಟ್ಟು ಗಗನ ।
ಕ್ಕೊಗೆದಂತಿರೆ ಕಂದಿ ಕುಂದಿದಾಬಾಳಿಕೆಯುಂ ॥ ॥೧೬೦॥

ವ॥ಅಂತು ಕಾಣಲೊಡನೆ ಝಳ್ಳೆಂದ ಮೆಲ್ಲೆರ್ದೆಯುಂ ಮೆಲ್ಲೆರ್ದೆಯೊಡನೆ ಸಮುಲ್ಲಸಿತವಾದ ಮೆಯ್ಸುವಿರುಂ ಮೆಯ್ಸುವಿರನವಿರತಂ ಮುಱುಂಗಿಸಿದ ಘರ್ಮಜಲಕಳಿಕೆಗಳುಂ ಘರ್ಮಜಲಕಳಿಕೆಗಳುದಿರೆ ಕಂಪಿಸುವ ಕಾಯಮುಂ ಸ್ಮರಶರಪ್ರಹಾರದಿಂ ನುಚ್ಚುನೂಱಾದಂತೆಯುಂ ಮಗುೞ್ದೆ ಬ್ಯತ್ತಂತೆಯುಂ ಮೋಹರಸಮೊಸರ್ದಂತೆಯುಂ ಭಯಂಬೆತ್ತಂತೆಯುಮಾಗೆ ಮತಿಮಱೆದು ಕುಮಾರನಂ ಕಂಡು ಈಕೆಯೀತನ ಮನದಾಕೆಯೆಂದಱಿದು ॥೧೬೧॥

ಅಲಿ ಮೊಗೆಯಲ್ಲಿ ಮಲ್ಲಿಗೆ ।
ಯಲರಂ ಪಡೆವಂತೆ ಭೂಪನಿರೆ ಕುರುಡಂ ಕ ॥

---

ಪಾ— 1 ಕಂಡು ಗ॥ 2 ಸಕೃಶ. ಚ॥

ಣ್ಮಲರಂ ಪಡೆದವ್ರೊಲೆಸೆದಂ ।
ಪೊಲಗೆಟ್ಟಂ ಬಟ್ಟೆಗಂಡವ್ರೊಲ್ ಮಕರಂದಂ ॥ ॥೧೬೧॥

ವ॥ ಆಗಳ್ ಕಂದರ್ಪನ ಕಾಟದಿಂ ಪೊಸೆದ ಪೂವಿನಂತಿರ್ದ ತರುಣಿಯುಮಂ ಪರವಶೆಗೆತ್ತು ಪುರುಡಿಸಿ ಪರಿಕುಪಿತನಾಗಿ ನೊಸಲನಡರ್ದ ಗಂಟಿಕ್ಕಿದ ಪುರ್ಬಿಂ ನಸುಗೆತ್ತುಮಧರಮುಮೊಸೆಯೆ ಪೊಸಗೆಂಪು ಪಸರಿಸಿದ ಕಣ್ಗಳಂ ಬಳ್ಪಿಂ ತೆಗೆದು ಮಾನವನುದನಂ ಪರಾವೃತ್ತವದನನಾಗೆ ಮಂದರಾಗಿಣಿಯಾದಂತಾ ಜೋಗಿಣಿಯುಂ ಜೋಗಿಯುಂ ಧ್ವಜಧರನುಮಿಂದ್ರಜಾಲಂಬೆರಸು ಪದ್ಮಾವತಿಯ ಮಾಯೆಯಪ್ಪುದಱಿಂದದೃಶ್ಯಮಪ್ಪುದುಂ ॥ ॥೧೬೩॥

ಬೆಱಗಾದಂ ಭೂಪತಿ ಮತಿ ।
ಮಱೆದಂ ಮಕರಂದನಿಂತಿದೇನಕ್ಕುಮೆನು ॥
ತ್ತುಱುವು ತಱಿಸಲ್ಲದಱಿದಿರೆ ।
ನೆಱೆಯೆ ಸಭಾಸದರುಮೊಲ್ದು ಕೌತುಕಮುತ್ತರ್ ॥ ॥೧೬೪॥

ವ॥ ಅಲ್ಲಿಂ ಬೞಿಯಂ ದ್ವಿಗುಣಿತವಿರಹದುಃಖನುಂ ತಾಂಬೂಲದಾನಮಾತ್ರವಿಸರ್ಜಿತರಾಜಲೋಕನುಂ ವಿನಯವಚನವಿದಳಿತಭ್ರೂಲತಾವಿಸರ್ಜಿತಸಚಿವಸಾಮಂತಸೀಮಂತಿನೀಸಮಾಜನುಮಾಗಿ ಸಜ್ಜೆಗುಜ್ಜುಗಂಗೆಯ್ದು ಪೋಪುದಂ ಕಂಡು ॥೧೬೫॥

ಅವು ನೋಡಂಬಕೆಗಳಬ್ಜಪತ್ರತತಿಯೊಳ್ ಕುಳ್ಳಿರ್ದು ಕಣ್ಮುಚ್ಚಿದ ।
ಪ್ಪವು ಕಾಯ್ಪೇಱಿದ ಸೌಧಕೂಟತಟದಿಂ ಪಾರಾವತಂ ಪಾಱಿ ಪೋ ॥
ಪುವು ಪಾಯ್ದಾಡುವರುಯ್ಯಲಿಂದೊಗೆವ ಬಂಬಲ್ವಂತುಟುಂ ಪಾದರ್ ಚಂ ।
ಚುವನುದ್ದಂ ತೆಱೆಯುತ್ತೆ ಸಾವರ್ಪವು ತಾಪೋದ್ರೇಕದಿಂ ಕೇಕಿಗಳ್ ॥

ದೇವ ನಿರೀಕ್ಷಿಸು ನೀಂ ರಾ ।
ಜೀವಸಖಂ ಸಜಳಜಳಧರಶ್ಯಾಮಾಭ್ರ ॥
ಶ್ರೀವತ್ಸಾಂಕನ ಪೋಕರ್ಟಿ ।
ಸ್ಪುವೆನೆ ಕೆದಱಿದಪನಮಳಕರಕೇಸರಮಂ ॥ ॥೧೬೭॥

ಸಜ್ಜೆಗೆ ಬಿಜಯಂಗೆಯ್ವುದೆ ।
ಕಜ್ಜಮೆ ಸೇವಕನ ತೆಱದೆ ಬಂದೋಲಗಿಪೀ ॥

ಮಜ್ಜನಕಾಲಮನುದಿತಜ ।
ಗಜ್ಜನ ಮನ್ನಿಸಲೆವೇೞ್ಪುದುತ್ತಮಸತ್ತ್ವಾ ॥ ॥೧೬೮॥

ವ॥ ಎಂಬುದುಂ ಮಕರಂದನ ಮಾತಂ ಮಾಱಲಱಿಯದರಿಕೆಮುಳಕಾನನಕರಿಕಳಭಂ ಕರೇಣುಕಾಮುಕನಪ್ಪ ಕರಿಕಳಭಂ ಕೂರಂಕುಸವಸದಿಂ ಮಜ್ಜನಂಬುಗುವಂತೆ ಮಜ್ಜನಂಬೊಕ್ಕು ಮತಿಶೀತಳತೆಯುನಪ್ಪ ಕೆಯ್ಯುಗುಮೆಂಬಂತೆ ಕರ್ಪೂರಪರಿಮಳರಜೋವಿಮಿಶ್ರಮುಳಯಜದ್ರವದ ರಜಃಕೋಶಕುಸುಮಜಾತದಿಂ ಶೀತಳನಾಥಶೀತಳಪವನಳಿನಮನರ್ಚಿಸಿ ತದ್ಧಳಾಲಂಕೃತೋತ್ತಮಾಂಗನಿನಿಸಾನುಂ ಮನದ ಬೇಗೆಯುಂ ನೀಗಿ ಮುನ್ನಮಾಪರಿಸಿದ ಮೋಹರಸಮನರಸಂ ಸ್ವೈರಿಸದಂತಿರನಧಿಗತರಸಾಸ್ವಾದನಾಮೋದಿತಮಧುರಮನೋಹರಾಹಾರಮನಾರೋಗಿಸಿ ಯಕ್ಷಕರ್ದಮಪರಿಸ್ಪೃದಿತಪಾಣಿಪಲ್ಲವನಡಸಿದಾಪತ್ತಿನಲ್ಲಿಗೆ ನೀನಲ್ಲದೆಮಗೆ ಹಸ್ತಾವಳಂಬಮಿಲ್ಲೆಂಬಂತೆ ಮಕರಂದಪ್ರಸಾರಿತಪ್ರಕೋಷ್ಠನಿಷ್ಠಿತವಾಮಕರತಳನುಂ ಬಿಸುಸುಯ್ದು ಬೆಂಕೆಯಿಂ ಕರಿಂಕುವರಿಗುಮೆಂಬಂತಿರೆ [1]ಕರ[1]ಕಮಲಾಂಗುಳೀದಳಸಮಾಕೃತಶ್ಮಶ್ರುಶಿಖರನುಂ ರಾಗಾಂಧತೆಯಿಂ ಮುಂದುಗಾಣದೆ ಮಾರ್ಗಮಂ ಗುಣಿಯಿಪಂತೆ ಸವಿನಯಪ್ರತೀಹಾರಿನಿವೇದಿತಮಾರ್ಗದತ್ತದೃಷ್ಟಿಯುಮಾಗಿ ॥೧೬೯॥

ಜಳಯಂತ್ರೋದ್ಗತದುರ್ದಿನಕ್ಕೆ ಘನಸಾರಾಂಭಶ್ಛಟಾಸೇಕಶೀ ।
ತಳಚಂದ್ರೋಪಳಕುಟ್ಟಿಮಕ್ಕೆ ಸಲಿಲಪ್ರಕ್ಷಾಳಿತಸ್ತಂಭಸಂ ॥
ಕುಳಸಂಶೋಭೆಗೆ ಚಂದನದ್ರವದಳತ್ಪುಷ್ಪೋಪಹಾರಕ್ಕೆ ನಿ ।
ರ್ಮಳವಿಶ್ರಾಮಗೃಹಕ್ಕೆ ಸದ್ಗುಣಗೃಹಂ ಶೃಂಗಾರಕಾರಾಗೃಹಂ ॥೧೭೦॥

ಇದು ವಿದಿತಪ್ರಬಂಧವನವಿಹಾರಸರೀಣತ ಪರಮಜಿನಚರಣರಮ್ಯ[2]ಹೈಮಾಚಲೋಚ್ಚಲಿತ
ನಖಮಯೂಖಮಂದಾಕಿನೀಮಜ್ಜನಾಸಕ್ತ ಸಂತತೋತ್ಸಿಕ್ತದಾನಾಮೋದ
ಮುದಿತಬುಧಮಧುಕರಪ್ರಕರ ಕವಿರಾಜಕುಂಜರ ವಿರಚಿತಮಪ್ಪ

ಲೀಲಾವತಿಯೊಳ್

ಇಂದ್ರಜಾಲವರ್ಣನಂ

ಚತುರ್ಥಾಶ್ವಾಸಂ.

---

ಪಾ— 1 ಗಿಂಕರ. ಕ॥ 2 ಪರ್ಯ್ಯ. ಗ॥



ಶ್ರೀರಮಣೀನಯನೋತ್ಸವ ।
ನಾರಾಯಣನಾಜಿವಿಜಯವಾರಣವಿಳಸ ॥
ದ್ವಾರಿ ನಸೆದಂ ಕಳಾರ್ಣವ ।
ತೀರಂ ಪುರುಷಾರ್ಥಪುಳಿನತಳಕಳಹಂಸಂ ॥ ॥೧॥

ವ ॥ ಅಂತು ನಸೆದೊಳಗಂ ಪೊಕ್ಕು ತನ್ಮಂದಿರಮಧ್ಯಸ್ಥಿತಕಾಂಚನಮಂಚದೊಳ್ ಚಂದ್ರಿಕಾಚ್ಛಧವಳದುಕೂಲಪ್ರಚ್ಛಾದಿತಹಂಸತೂಳತಲ್ಪದೊಳೊಯ್ಯನೆ ಮೆಯ್ಯನೀಡಾಡಿ ಕರ್ಪೂರಸಾರಪರಿಕಲಿತಪರಿಮಳಪ್ರೋಕ್ಷಿತಕ್ರಮುಕಕಮನೀಯಕಲಶಪೂರಿತಫುಲ್ಲಕಪೋಲಫಲಕಂ ದಂತಾಗ್ರದಳಿತಮಕರಂದದೀಯಮಾನನಾಗವಲ್ಲೀಧವಳದಳವೀಟಿಕಾವಿಳಸಿತವದನನಿನಿಸುಬೇಗಮಿರ್ದು ಮೆಲ್ಲನಿಂತೆಂದಂ:— ॥೨॥

ಬಗೆವುಗಲಿಂತು ತೋಱುಗುಮೆ ವಾಸವನೋಲಗಬೊಳ್ಪನಿಂತು ತೋ ।
ಱುಗುಮೆ ಸುರಾಂಗನಾಸರಸಲಾಸ್ಯವಿಳಾಸಮನಾತನಿಂತು ತೋ ॥
ಱುಗುಮೆ ಬೞಿಕ್ಕವಳ್ ಬಯಸಿ ನಿಂ ಬೆಸಗೊಂಡವೊಲಾಗಳಂತಿರಾ ।
ಮೃಗಧರವಕ್ತ್ರೆಯಂ ಮೊಗಸಿ ಮನ್ಮೃದುಮಾನಸರಾಜಹಂಸಿಯಂ ॥೩॥

ತೆಗೆದೆನ್ನಂ ಕನಸಿಂದೆ ಸುಂದರಿಯ ರೂಪಂ ತೋಱಿ ಬೆಳ್ಮಾಡಿ ಮ ।
ತ್ತೆ ಗಡೇಂ ತೋಱಿದ ನಿಂದ್ರಜಾಲದೊಳದಿನ್ನೇನಾಗಲೆಂದಿರ್ದುದೋ ॥
ಬಗೆದೇಂ ಪೋಗದೊ ಪೇೞಿಗಲ್ಲಿದಪನೆನ್ನಂ ಧಾತ್ರನವ್ಯಾಜದಿಂ ।
ಮೃಗಮಂ ಸೋಯೆ ಬೞಿಲ್ಚುವಂತೆ ಮೃಗತೃಷ್ಣಾದರ್ಶನವ್ಯಾಜದಿಂ ॥೪॥

ಅಲ್ಲದೊಡೀಜಗತ್ತ್ರಯದೊಳಗ್ಗಳಮೊಪ್ಪುವ ರಾಜಪುತ್ರಿಯಂ ।
ಸಲ್ಲಲಿತಾಂಗಿಯಂ ಪದೆಸು ಕಂಡೊಡೆ ತೋಱಿಮೆನಲ್ಕೆ ತೋಱಿಯುಂ ॥
ನಿಲ್ಲದೆ ತಾನಿದಾರ ಮಗಳೀವಧುವೆಂಬಿನಿತರ್ಕೆ ಮಿಕ್ಕ ವಿ ।
ದ್ಯುಲ್ಲತೆವೋಲವಳ್ ಬೆರಸು ಜೋಗಿಣಿಯಾಗಳೆ ಮಾಯಮಪ್ಪಳೇ ॥ ॥೫॥

ವ ॥ ಎಂದು ಮತ್ತಮಿನಿಸಾನುಂ ಭಾವಿಸಿ

ಆಸತಿ ಮುನ್ನ ಕಂಡ ತೆಱನಲ್ಲದೆ ಬಂಬಲ ಬಾಡಿ ಕೊಂಡು ಮು ।
ನ್ನೀಸಱ ಚಂದ್ರಲೇಖೆಯವ್ವೊಲಿರ್ದುದನನ್ಯನೊಳಾತ್ಮಚಿತ್ತಮಂ ॥
ಸೂಸಿದಳೆಂದೆ ಭಾವಿಸಿ ಮದೀಯಮನಂ ಬಿಸಿಲಿಂದೆ ಬೆಂದರಂ ।
ಕೇಸುರಿಯಿಂದೆ ಕಾಸಿದವೊಲಾದಪ್ರದೀಗಳದೆಂತು ಸೈರಿಪೆಂ ॥ ॥ ೬ ॥

ಪಡಿಯಿಟ್ಟು ತೋಱುನವ್ವೊಲಾ ।
ಗಡೆ ತೋಱಿವರಲ್ತೆ ಮಾಯ್ದು ಮಾಯಾವಿಗಳೇಂ ॥
ಪಡಿಯಾದರೆ ಕಾಮನ ಕೈ ।
ಪಿಡಿಯಂತೆಸೆವವಳ ನೆಱಲೊಳಂ ಸುರವಧುವಿರ್ ॥ ॥ ೭ ॥

ವ ॥ ಎನೆ ಸಚಿವಸುತನಿಂತೆಂದಂ :—

ಸ್ತ್ರೀರತ್ನಂ ಭುವನತ್ರಯ ।
ಸಾರಮವಲ್ಲದೊಡೆ ನಿನ್ನನೊಲಿಸುವುದಿಱಿವೇ ॥
ಶ್ರೀರಮಣಿಯಲ್ಲದಂಗನೆ ।
ನಾರಾಯಣನಂ ಮರುಳ್ಗೊಳೇನಾರ್ತಪಳೇ ॥ ॥ ೮ ॥

ತಾಂ ಗಡ ಮೆಚ್ಚನಾಂ ಪಱೆದ ಪೆಂಡಿರನೆಂದಭಿಮಾನಮೋಱಿ ಚೆ ।
ಲ್ವಿಂ ಗೆಡೆಗೊಂಡು ನಿನ್ನ ನವಯೌವನರೂಪವಿಳಾಸದರ್ಪಮಂ ॥
ಭಂಗಮನೆಯ್ದಿಪೆಂದು ಬಗೆಯೊಳ್ ಬಳೆದಾಗ್ರಹದಿಂದೆ ಪೆತ್ತನಾ ।
ಅಂಗನೆಯಂ ಸರೋಜಭವನಲ್ಲದೊಡಾಕೃತಿಯಿಂತುಟಕ್ಕುಮೇ ॥ ॥ ೯ ॥

ಪುಸಿಯೆಂದು ಬಗೆಯೊಳಂ ಭಾ ।
ವಿಸದಿರು ಪುಸಿಯಾದೊಡವನೆ ವಿದ್ಯಾಧರಿ ತೋ ॥
ಱಿಸುಗುಮೆ ಪ್ರಸಿಯಣಮಲ್ಲಿದು ।
ಪುಸಿಗೇಂ ಸಂವಾದಮುಂಟೆ ಸತ್ಯಪತಾಕಾ ॥ ॥ ೧೦ ॥

ಕಾರಣಮೇನಾನುಮನಿದು ।
ಕಾರಣಮೆಯ್ದಿಸದೆ ಮಾಣದಲ್ಲದೊಡೆ ಚಮ ॥
ತ್ಕಾರಿಗಳೊರ್ಮೆಯೆ ಮಾಯಾ ।
ಕಾರಮನಾಕರಿಪುದರ್ಕೆ ಕಾರಣಮೇನೋ ॥ ॥ ೧೧ ॥

ವ॥ ಎನೆ ಮತ್ತಮರಸನಿಂತೆಂದಂ:—

ಇಂಪೇೞದೆ ನಿಲೆ ಹೃದಯದೊ ।
ಳಂಪೇೞದೆ ಪೋಕುಮೆಂದೆ ಪೇೞ್ವೆಂ ಕೇಳಾಂ ॥
ಪೆಂ ಪಗಲೆ ಧೃತಿಯನೆರ್ದೆಯಿಂ ।
ಪೆಂಪಗಲೆ ಸುಧಾಂಶು ಮೂಡಿದಿರುಳೞವೞವೇಂ ॥ ॥೧೨॥

ನೆನೆದವಳಂ ಸತ್ತಪೆನಾ ।
ನೆನೆ ದಯೆಯಿಂ ತಂದು ಕುಡುವನಾವನೊ ಮುನಿಬೆ ॥
ನ್ನನೆ ಗೋಱಿಗೊಳಿಸಿದತನುವ ।
ನನೆಗೋಲ ಮೊಗಕ್ಕೆ ತಪ್ಪಿ ಪೋದೊಷೆ ಸಾಲ್ಗುಂ ॥ ॥೧೩॥

ಆಗುರುನಿತಂಬೆಯಿಾಭೂ ।
ಭಾಗದೊಳಿರದೆತ್ತಲಿರ್ದಪಳ್ ಬಗೆಯೆ ನಿರು ॥
ದ್ಯೋಗಿಗೆ ದೈವಸಹಾಯಮು ।
ಮೇಗೆಯ್ಗುಮೆ ಪೋಪೆಮಱಸಿ ಮದ್ವಲ್ಲಭೆಯಂ ॥ ॥೧೪॥

ಎನಗಿಲ್ಲಿರ್ದೊಡೆ ಪೋಬ್ಬು ಪೋಗದಸಮಾಸ್ತ್ರವ್ಯಾಧಿಯುಂ ಪಿಂಗದಾ ।
ವನಿತಾವಾರ್ತೆಯುಮಾಗದಾವ ದೆಸೆ ರಮ್ಯೋದ್ದೇಶಮುಂ ರಮ್ಯನಂ ॥
ದನಮುಂ ರಮ್ಯನದೀನದಪ್ರಕರಮುಂ ರಮ್ಯಾದ್ರಿಯುಂ ರಮ್ಯದೇ ।
ವನಿವಾಸಂಗಳುಮುಳ್ಳದಾಡೆಸೆಗೆ ಮುಂ ಪೋಪಂ ಮಮಸ್ಯೋತ್ತಮಾ ॥

ಸುಖಮೀವುದೆ ರಾಜ್ಯಂ ಪ್ರಿಯ ।
ಸಖ ರಾಜ್ಯಮೆ ದುಃಖಮಪ್ಪುದಪ್ಪೊಡೆ ರಾಜ್ಯಂ ॥
ಸುಖಮಲ್ತು ರಾಜ್ಯದಿಂದಂ ।
ಸುಖಮಿಲ್ಲದೊಡೇಕೆ ರಾಜ್ಯಮಾರಾಜ್ಯದೊಳೇಂ ॥ ॥೧೬॥

ವ॥ ಎಂದು ಮಕರಂದನನೊಡಂಬಡಿಸಿ ಬಡಗಮೊಗದೆ ಪಯಣಂಗೆಯ್ಯಲ್ಕೆ ಗಸಿರ್ದುಮುನ್ನಗಂ ವಿಗತನಸುವಾಗಿ ಪಶ್ಚಿಮಗಿರಿಶಿಖರಕಾನನದೊಳ್ ಬಿದು ಭಾಸ್ಕರಂ ತಸ್ಕರನಂತಿರೆ ಸೆಮರುಣಮಣಿವಿರಾಜತಮಪ್ಪ ವರುಣನಿಳಯಮಂ ಪುಗುವುದುಮರ್ಧಮುಕುಳಿತಕಮಳಕಾನನೋತ್ಪತಿತದ್ವಿರೇಫಪಟಳ

ಪಕ್ಷಾನಿಲವಳಿತವಾಸಂತಿರುತ್ಪಳಕುಳವುಳ್ಳಲತೆ, ತಿಮಿರತಮಾಳಪಲ್ಲವನವಕ
ರ್ಣಪೂರಕಮನೀಯದಿಕ್ಕಾಮಿನೀಮುಖಕುಂಕುಮದಂತೆ ಕೆಂಕವಾಗಿ ಪ
ಶ್ಚಿಮಸಂಜೆ ರಂಜಿಸೆ, ಚತುಃಪ್ರಹರಚರಮಕಪಳಾನಾದಪ್ರಹತಪಟಹಪಟು
ರವಾನುಗಮ್ಯಮಾನಸಾಂಧ್ಯಶಂಖಧ್ವನಿಯೊಡನೆ ಶಯ್ಯಾತಳದಿನಿಳಾತಳತಿಳ
ಕನೆಬ್ಬಿದ್ದು ನಿವರ್ತಿತಸಂವಿದಿತಸಂತತಸುಸ್ನಾನವಶಾನಿಪೀತಗಂಧತೈಲಪರಿಣತ
ಪರಿಮಳಜ್ವಾಳೋದ್ಗಾರಿ ಗುರುನಿತಂಬಿನೀನೀರಾಜಿತಮಂಗಳಪ್ರದೀಪ
ದೀಪ್ತಿಪ್ರತಿಫಲಿತಮುಖಮಯೂಖನಲ್ಲಿಂ ಪ್ರೌಢಮುಟ್ಟ್ಯ ಪ್ರಣ್ಯಾಪಾತಕಪ್ರಕ
ರಪತ್ಯಮಾನನಾನಾನವ್ಯಪದ್ಯಗದ್ಯಪದಾರ್ಥಾರ್ಕರ್ಣಕೀರ್ಣಾಂತಃಕರಣಂ ತ
ತ್ವಮಯಸಮುಪಗತಪ್ರಗಲ್ಭತರುಣಪ್ರಾಯಪರಿಜನಪರಿವೃತಂ ತಮಿಸ್ರಾತ್ರ
ಸ್ತಶರಣಾಗತಸಹಸ್ರಕಿರಣಸಂಕುಚಿತಕಿರಣಾಯಮಾನಕರದೀಪಿಕಾಸಹಸ್ರ
ಪರಿವೇಷ್ಟಿತನಭಿನವಾಂಕುರಿತಾಕರಾಳತರಣಿತೇಜಃಕಲ್ಪಕರತಳಚಾಲಿತಚಕ್ಷು
ರಿಕಾಚಕ್ಷುರಿತಮರೀಚಿಕಾವಚಿತಕಮನೀಯಕಾಯನತಿತ್ವರಿತಗತಿಯಿಂ ಬಂದತಿ
ಬಹಳಕಾಳಾಗರುಧೂಪಧೂಮಪಟಲನಿಪೀತಪೀತಪ್ರಭಾಪ್ರಸರಪ್ರದೀಪ್ತದೀ
ಪಮಂಜರೀಮನೋಹರಮಂದರಗಲಿತಮಾಲತೀಮಲಯಜದ್ರವದತ್ತಪರಿಮ
ಳಪಾನಮತ್ತಮಧುಕರನಿಕರಝಂಕಾರಮುಖರಿತಮುಮಪ್ಪ ಶೀತಲನಾಥಜಿ
ನಾಲಯಮಂ ತ್ರಿಚತುರಜನಸಮೇತಂ ಪ್ರೊಕ್ಕು ಪರಿಶುದ್ಧಪ್ರಬುದ್ಧಬಾಹ್ಯಾಂ
ತರಂಗನಾಗಿ ಭಾಳಭೂಷಿತಕರಕಮಳಮುಕುಳಿತಂ ನವೀನಕರತಳನಖತಾರ
ಕಿತಜಿನಪತಿಪಾದಪಲ್ಲವರಾಗಂ ರಮಣೀಯಮಸ್ತುತ್ಯನಿತ್ಯಶುಭಸಂಧ್ಯಾವಂದನಂ
ಗೆಯ್ದು ಬಂದಾಸ್ಥಾನಮಂಟಪಮಧ್ಯಸ್ಥಿತಸಿಂಹಾಸನಾರೂಢಂ ಸಕಲಸುಕವಿಸ
ಚಿವಸಾಮಂತವಿಳಾಸಿನೀಜನವಳಯಿತನಾಗಿಕಿಱಿದು ಬೇಗಮಿರ್ದೋಲಗಮಂ
ವಿಸರ್ಜಿಸಿ ಮಕರಂದದ್ವಿತೀಯಂ ಕರುಮಾಡದ ನೆಲೆಯನೇಱಿ ಕುಸುಮದೆ
ಸಳಂ ಪಾಸಿದ ಪಾಸಿನೊಳ್ ಪಟ್ಟಿರ್ದು ಭೂತಳತಳ್ಪದೊಳೊಱಗಿಯೂರುಗ
ಳನೊತ್ತುತ್ತುಂ ತೊಂಕಡಿಸುತ್ತುಮಿರ್ದು ಸಚಿವಸುತನನನುವಿಸಿ ಸವಿಸ್ತರಂ
ಸ್ವಪ್ನವೃತ್ತಾಂತಮನುಕ್ತಪ್ರಸರುಕ್ತಮನನುರಕ್ತಿಯಿಂ ನಟ್ಟಿರುಳೞವಿನಂ
ಪೇೞ್ದು ಪೇೞ್ದು ಸುಖದಿಂ ಮೂರ್ಛೆವೋದಂತೆ ಕಣ್ಮುಚ್ಚಿ ಮನಂ ಮಱೆ
ಯದುದಱಿನಿನಿಸಾನುಂ ಬೇಗದಿಂ ಗಮ್ಮನೆಚ್ಚತ್ತು ನಿಜಸಖನುಮನೆಚ್ಚಱಿಸಿ

ಕರುಮಾಡದಿನಾರುಮಱಿಯದಂತಿರಿಱಿಸು ಮನೋಜಮನೋಹರಂ ಮನೋ
ಹರಿಯೆಂಬ ಪೆಸರಾ ॥ ॥೧೭॥

ಬೆಳಗಪ್ಪ ಜಾವದೊಳ್ ಪೂ ।
ಗೊಳದಿಂ ಪೊಸಪೂವನಱಿಸಿ ಪೊಱಮಡುವೆಳವ್ರೋಲ್ ॥
ಚಳಿವತಿ ಮಕರಂದಸಮು ।
ನ್ಮಿಳಿತಂ ಪೊಱಮಟ್ಟನರಸನಾಪುರದಿಂದಂ ॥ ॥೧೮॥

ಅಂತು ಪೊಱಮಟ್ಟು ಪುರದಿಂ ।
ಸಂತತಮಾಕಾಂತೆಯಲ್ಲಿಗೆಡೆಯಾಡುವ ಚಿ ॥
ತ್ತಂ ತುರಿಪದಿನೊಡಗೊಂಡು ।
ಯ್ವಂತಿರೆ ಮಧುವಿರ್ಪ ದೆಸೆಗೆ ಪಯಣಂಬೋದಂ ॥ ॥೧೯॥

ಬಳಿಯಂಬು ಪೂವಿನಂಬೆನೆ ।
ತೊಳಗುವ ಪದವಿಲ್ಲೆ ನನೆಯ ಬಿಲ್ಲೆನೆ ಬೆನ್ನೊಳ್ ॥
ತಳೆದು ನಡೆತರ್ಪ ತನ್ನಯ ।
ಕೆಳೆಯಂ ಮಧುವೆನೆ ಮನೋಜನಂತಿರೆ ನಡೆದಂ ॥ ॥೨೦॥

ವ॥ ಆಸಮಯದೊಳ್ ಪ್ರಮದೋದ್ಯಾನದೊಳ್

ಅನಿಲಾಂದೋಳಿತಪಾದಪಾಗ್ರವಿಗಳತ್ಪುಷ್ಪೋತ್ಕರಂ ಸೇಸೆಯಾ ।
ಗೆ ನವೋದ್ಭಿನ್ನಸರೋಜಮಂಜುಮಧುಗಂಧಭ್ರಾಂತಭೃಂಗಾಂಗನಾ ॥
ನಿನದಂ ಮಂಗಳಗೀತಮಾಗೆ ಪಿಕಕೋಕಾನೀಕನಾನಾವಿಧ ।
ಧ್ವನಿಗಳ್ ವಾದ್ಯನಿನಾದಮಾಗೆ ನಡೆದಂ ಸಂಗೀತಗಂಗಾಧರಂ ॥೨೧॥

ವ॥ ಅಂತು ನಿರ್ಗಮಸಮಯನಿಸರ್ಗಶುಭಮಂಗಳಾಚಾರಂಗಳುಮನಭಿ
ನವೋದಯಪ್ರಭಾಪಟಳಭಾಳಪಲ್ಲವಭೂಷಣ ವಿಭೂಷಿತಪೂರ್ಣಸುವರ್ಣ
ಕುಂಭಮುಮನಿದಿರ್ಗೊಳುತ್ತುಂ ಶುಭಶಕುನಂಗಳುಮಂ ಕೈಕೊಳುತ್ತುಂ
ಸಮಾವೇಲ್ಲಿತಾನೂನಧಾನ್ಯಧನಕನಕಸಮೃದ್ಧಿವಲ್ಲಿಗಳಪ್ಪ ಪಲ್ಲಿಗಳುಮನನ
ವರತವಿವಿಧಜನಾಗಮಂಗಳಪ್ಪ ನೈಗಮಂಗಳುಮನಪಹಸಿತಕುಬೇರನಗರಿಗೆ

ಳುಮಪ್ಪ ಶೋಭಾನಗರಿಗಳುಮಂ ನಿಸ್ಸೀಮಸಕಳಭೋಗಸಾಮ್ಯಸಮು
ದ್ಯಾಮಂಗಳಪ್ಪ ಗ್ರಾಮಂಗಳುಮಂ ಸಮಸ್ತಸಮಯಸಂಪತ್ಸನಾಥಂಗಳ
ಪ್ಪ ಪತ್ತನಂಗಳುಮಂ ಪ್ರವಿಶತ್ಪ್ರಜಾಪೂರನಿಬಿಡಿತಗೋಪುರಂಗಳುಮಪ್ಪ
ಪುರಂಗಳುಮಂ ಭೂಸುರಪುರವರ್ಗಂಗಳಪ್ಪ ಸರ್ವಸಸ್ಯಂಗಳುಮಂ
ವಿಶದವೇಶವೇಶ್ಯಾವಾಟಂಗಳಪ್ಪ ಖೇಟಂಗಳುಮಂ ಕಥಕಕೌತೂಹಕಕುಹಕ
ಹೇರಂಬಚಂಡಭೈರವಚಂಡಚಂಡಿಕಾರೂಪಕೋಪ ಜೀವಕಶಂಖಶೃಂಗಸಮು
ಡ್ಡಾಮರಡಮರುಡಿಂಡಿಮಾರಾವಮುಖರಿತವೀಥೀವಿಟಂಬಂಗಳಪ್ಪ ಮಡಂಬಂ
ಗಳುಮಂ ನೋಡುತ್ತುಂ ಕೌತುಕರಸದೊಳೋಲಾಡುತ್ತುಂ ಸಮುಚಿತಾ
ಶ್ರಯಂಗಳಪ್ಪಾಶ್ರಮಂಗಳೊಳ್ ವಿಶ್ರಮಿಸುತ್ತುಂ ಮನೋಹರವನಪ್ರದೇ
ಶಂಗಳೊಳ್ ಭ್ರಮಿಸುತ್ತುಂ ಬರ್ಪ ರೂಪಕಂದರ್ಪದೇವಂಗೆ ದೇಶಯಾ
ತ್ರಾಸುಖೋತ್ಸವಮನನಟಯಿಸುವಂತೆ ॥೨೨॥

( ಶಿಖರಿಣೀವೃತ್ತಂ )

ಸರಿತ್ಸ್ರೋತೋರಮ್ಯಂ ಕ್ಷಿತಿ ತೊಳಗೆ ಸಸ್ಯಪ್ರಸರವಂ ।
ಕರಂ ಕಾಂತಂ ಕಾಲಂಗಳೊಳ್ ಸಲಿಲಾವರ್ತಶರದಂ ॥
ಶರಾರೂದ್ಯತ್ಕಾಮಿದ್ವಿಪಕಳಭಮುಂದಾಗೆ ಸರದಂ ।
ಪರಾಗಶ್ರೀ ನೆಯ್ದಿಲ್ಗೊದವಿ ಬರೆ ಬಂದತ್ತು ಸರದಂ ॥ ॥೨೩॥

ನೀರದವಿಟಂಗೆ ವಿದ್ಯು ।
ನ್ನಾರಿಯ ವಿರಹಂ ಪೊಣರ್ಚೆ ಬಡವಾಗಿ ಕರಂ ॥
ದೂರಿಸಿ ಬೆಳರ್ತ ತೆಱದಿಂ ।
ಶಾರದಜಳಧರದ ತುಱುಗಲೊಗೆದುವು ನಭದೊಳ್ ॥ ॥೨೪॥

ಗಗನಶಿಲಾತಳದೊಳ್ ಫೆನ ।
ಖಗಸಂಕುಳ[1]ಮೆಚ್ಚವಿಕ್ಕಿ ಪೋದುವೊ ಮಿಗೆ ಬಾಂ ॥
ಜಗುನೆಗೆ ನೆಗೆದುವೊ ನೊರೆಯೆನೆ ।
ಬಗೆಗೊಂಡುವು ಬಾನೊಳೊಗೆದ ಬೆಳಿಯ ಮುಗಿಲ್ಗಳ್ ॥ ॥೨೫॥

ಪಾ— 1 ಮೆಚ್ಚಲಿ ಚ॥

ಜೀವನಮುಳ್ಳನಮಿತ್ತ ಖಿ।
ಳಾವನಿಗಂ ಕೀರ್ತಿಶೇಷನಾಯ್ತನೆ ತುಂಗಾ॥
ಬ್ದಾವಳಿ ಬೆಳತುರ್ ಬಾನಂ।
ತೀವಿದುವು ಪರೋಪಕಾರಿ ಕೆಟ್ಟೊಡೆಯುಂಟೇ॥ ॥೧೬॥

ಶರನಿಧಿಯನಡಕಿ ತೇದೊಡೆ।
ಸುರಿದಪುವೋ ಪೊತ್ತು ತಂದು ಮುತ್ತುಮನೆಂಬಂ॥
ತಿರೆ ಬಿಸಿಲೊಳೆಸೆವ ಪೊಸವೆ।
ಳ್ಸರಿಯಂ ಸುರಿದುವು ಸಡಿಲ್ದ ಬಿಳಿಯ ಮುಗಿಲ್ಗಳ್॥ ॥೧೭॥

ತಿಳಿದುವು ನೀರ್ಗಳ್ ತಿಂಗಳ್।
ತೊಳೆದಂತೆ ಪಳಚ್ಚನಾಯ್ತು ಗಗನಂ ಮುಸುಕಂ॥
ಕಳೆದಂತೆ ಪೋಗೆ ಮೇಘಂ।
ತೊಳಗಿದುವು ದಿಶಾಮುಖಂಗಳಂದಿನ ದಿವಸಂ॥ ॥೧೮॥

ದೆಸೆಯಂ ಮುಸುಳಿಸಿದ ಮುಗಿ।
ಲ್ಗೆಸಱಂ ತೊಳೆದೆತ್ತು ಕಳೆವವೋಲ್ ಕವಿದು ಪೊನ॥
ಲ್ಮಸಗಿತು ಪೊಸವೆಳ್ದಿಂಗಳ್।
ಜಸಮಂ ಪರ್ಬಿಸುವ ತೆಱದೆ ಕವಿಶೇಖರನಾ॥ ॥೧೯॥

ಪಸುವೋಡುವಿನಂ ಹರಣಂ।
ಹಸರಿಸುವಿನಮೀಂಟಿದಂತೆ ಬೆಳ್ದಿಂಗಳುಮಂ॥
ಬಿಸಿಲುಮನೇನೆಸೆದಿರ್ದವೊ।
ಪೊಸನೆಯ್ದಿಲ ಪೂವುಮಲರ್ದ* ತಾವರೆವೂವುಂ॥ ॥೨೦॥

ಎಲರೆತ್ತಿ ಸುರಿದು ನೀರ್ಕಿ।
ನ್ನೆಲದಂತಿರೆ ಪರೆದು ಪುದಿಯೆ ಕಿಂಜಲ್ಕಂಗಳ್॥
ಜಲರುಹದಲಗ*ರ್ಳದೇಂ ಜಲ।
ಜಲಿಸಿದುವೋ ಬಯಲೊಳಲರ್ದ* ಜಲರುಹದಲವೋ*ಲ್॥ ॥೨೧॥

ಎಲೆಪುಱುಗಲೆತಿಸು ಪಕ್ಷಿಯು ।
ನೆಲಗಟ್ಟಂ ಕಟ್ಟಿದಂತೆ ಪೆಪ್ಪಳಿಸಿರೆ ಪೂ ॥
ವಲಿಗೆವಱಿವಂತಿರೆಸೆವುವು ।
ಜಲಜಂಗಳ್ ಕೊಳಗಳೆಂಬ ಸಿರಿಯುರವುನೆಯೊಳ್ ॥　　॥ ೩೦ ॥

ಅಂಬುಜಮುಖಿಯುರ ತನುಲತೆ ।
ತುಂಬುತ್ತಿರೆ ತೆರೆಯುನಿಱಿಯೆ ವೊಲೆ ತಡಿತಡಿಗೊಂ ॥
ಡಿಂಬಾಗೆ ಪ್ರೇಳೆವ ಪಕ್ಷಿಯು ।
ಕೊಂಬುಗಳಂ ಪಿಡಿದು ನಿಲ್ಕ ನೆಯ್ದಿಲನಾಯ್ದರ್ ॥　　॥ ೩೩ ॥

ಸಿಂಜಾನಸಮುದಷಟ್ಪದ ।
ಞಂ ಜೇವ್ರೊಡೆಯೆನಿಸೆ ಪುಳಿನತಳದೊಳ್ ಸುಮನೋ ॥
ಮಂಜರಿಯುಂ ಮುಸುಕಿದ ನವ ।
ಮಂಜುಲಲತೆ ಮದನಚಾಪಲತೆಯುನೆ ಪೋಲ್ಕುಂ ॥　　॥ ೩೪ ॥

ನೆಗೆದಂಚೆಗಳೇಱಿತ್ತಿಂದುವು ।
ಗಗನಾಗ್ರದಿನಿೞಿದ ಬೆಳ್ಮುಗಿಲ್ಗಳ ಮುಱಿವಿಂ ॥
ಡುಗಳೆನೆ ಬೆಳ್ದಾವರೆ[1]ಯೊ ।
ಳ್ಮುಗುಳ್[1]ನೆ ಮಾನಸದ ಹಂಸಿಗಳ್ವರಸಾಗಳ್ ॥　　॥ ೩೫ ॥

ಕಂದಂಗಳಂತಿರಂಚೆಗ ।
ಳಂದೇಱಿತ್ತಿರೆ ತೊಱೆದ ಮೊಲೆಗಳಂತಿರೆ ನಳಿನೀ ॥
ಕಂದಂಗಳಿಂದಮೊಡನೊಗೆ ।
ತಂದುವು ನವಕುಂದಧವಳಕೋರಕನಿಕರಂ ॥　　॥ ೩೬ ॥

ವನರುಹಕಂದದ ಕೊನರ್ಗಳ್* ।
ಕೊನರ್ತ ತನಿರಸಮನೀಂಟಿ ಗರ್ಗರರವದಿಂ ॥
ದನಿಯೊಡೆಯೆ ಕರೆದುವೋಡುವ ।
ಘನಸಮಯಮುನಾರ್ವ ತೆಱದೆ ಕಳಹಂಸಂಗಳ್ ॥　　॥ ೩೭ ॥

ಪಾ— 1 ಮುಗುಳನೆ. ಕ॥ ಗ॥ ಚ॥

ಪಿಂದೆ ತಲೆದೆಗೆದ ಕದಿರ್ಗಳ್ ।
ಸಂದಣಿಗೊಂಡರ್ಕಬಿಂಬದಿಂ ಪೊಱಪೊಣ್ಮು ॥
ತ್ತೊಂದೊಂದನೊರಸಿ ಕಿಡಿವಿಡು ।
ವಂದದೆ ಕಡುವಿಸಿಲ ಪೊಳೆಪುವಡೆದುದು ಕಾಯ್ಪಂ ॥ ॥೩೮॥

ಅಳುರೆ ಶರದದ ಬಿಸಿಲ್ ಕೋ ।
ಮಳಿಕೆಯ[1]ನುಱದಿ[1]ನಿಸು ಬಾಡಿ [2]ಕಂದಿರ್ದಳ್[2] ಕುಂ ॥
ಗಳತಾಕುಮಾರಿ ಮುಗುಳ್ವ್ವ ।
ಣ್ಮೊಳೆತೊಡೆ ಮೆಯ್ವಾಯ್ದು ಬಡಬಡಾದಂತಾದಳ್ ॥ ॥೩೯॥

ಮುನ್ನಂಗಿ ದಹನನಂ ತಪ ।
ನನ್ನೆಲಕುಗುಳ್ವಂತೆ ಬಿಸುಗದಿರ್ಗಳ್ ನೆಱೆ ಕಾ ॥
ಯ್ವನ್ನಂ ಸುಡುತಿರೆ ಪಥಿಕರ್ ।
ಬೆನ್ನಂ ಕೊಂಡೋಡಿ ಮೆಳೆಯ ನೆೞಲಂಸಾರ್ದರ್ ॥ ॥೪೦॥

ಅರಗಿಳಿಯ ಪಿಂಡು ಬಂದುಗೆ ।
ಯರಲಂದದ ಚಂಚುವಿಂದೆ ಕೞಮೆಯ ತೆನೆಯಂ ॥
ಬರೆ ಕಚ್ಚಿ ಪಾಱುತಿರ್ದುವು ।
ಶರದಂ ಪುಗೆ ಪಾಱಿ ಪೋಪ ಸುರಚಾಪದವೋಲ್ ॥ ॥೪೧॥

ಪೊಳೆವ ಬಿಸಿಲ್ಗೆ ಮೆಯ್ವೊಳಗು ಚಂದನಪಾಂಡುಪಯೋಧರಾಗ್ರದಿಂ ।
ಬಳೆದಿೞತರ್ಪ ಬೆಳ್ಸರಿಗೆ ಹಾರಮೆ ಸಾಲ್ತಿರೆ ಪೋಲ್ವೆಯಿಂ ಸಮು ॥
ದ್ವಳಿತಸರೋಜಗಂಧಿ ಕಳಹಂಸಮನೋಹರಯಾನೆ ಸಸ್ಮಿತೋ ।
ತ್ಪಳಧವಳಾಕ್ಷಿಯೋಂ ಸುರಿದಳೋ ಶರದಂಗನೆ ಕಣ್ಗೆ ಶೋಭೆಯಂ ॥೪೨॥

ತೊಳಪ ಬಿಸಿಲ್ ತಳತ್ತಳಿಸಿ ಕಾಯ್ದು ಪೊದಳ್ದಿರೆ ಮೆಯ್ಯಬೆಂಕೆವೋಲ್ ।
ತಳಿವ ಹಿಮಾಂಬು ಬೆಳ್ಸರಿ ಚಳಿದ್ವಳವೀಚಿಕೆ ಪಾಱುತಿರ್ಪ ಪೆ ॥
ಣ್ಗಳಗಳೆಱಂಕೆಯಾಗೆ ನವಪಾಂಡುಪಯೋಧರೆ ದರ್ಶಿತಾಶೆಯು ।
ತ್ಪಳಕುಲಭೂಷೆಯೋಂ ವಿರಹಿಯಂತೆ ಶರದ್ವಧು ಕಣ್ಗೆ ವಂದಳೋ ॥೪೩॥

ಪಾ— 1 ನಿನಿಸಿ ಚ॥ 2 ಕೊಂಡಿರ್ದಳೆ. ಕ॥ ಚ॥

ವ॥ ಅಂತು ಬಂದ ಶರತ್ಸಮಯದೊಳ್

ಕೆಸಱಿಂ ಕುಱಿಯಿಂ ನಾನಲಿ ।
ನಸಿದಾಗಿರೆ ಕೊಂಕಿ ಪೋದ ಬಟ್ಟೆಗಳೆಲ್ಲಂ ॥
ಪಸಲೆಗವಿದಂದು ಸೈತಿರೆ ।
ವಸುಧೇಶನುಮಾರ್ಯಸುತನುಮೊಯ್ಯನೆ ನಡೆದರ್ ॥　　　　　　　॥೪೪॥

ಅಡಿಗೆ ಕಡುಮೆಲ್ಪನೊಪ್ಪಿಸು ।
ವಡೆ ಕಣಿಕ್ಕೆಯಡಿಯನೂಱಿ ನಸುಗೆಸಱಿಂ ಕೇ ॥
ಸಡಿಯೆಸೆದುವು ಕತ್ತುರಿಯಂ ।
ತೊಡೆದಂತಿರೆ ನಡೆವ ಸುಕರಕವಿಶೇಖರನಾ ॥　　　　　　　॥೪೫॥

ವ॥ ಅಂತು ನಡೆಯುತ್ತುಮದಲ್ಲದೆ ಕನಳ್ಕುಮುದಕಾನನಂಗಳಿಂ ಕೆಂಪಡರ್ದ ಕಳಮಕೇದಾರಂಗಳಿಂ ತೀವಿ ತಿಳಿವು ತೆರೆಗಟ್ಟುವ ತಟಾಕಸರೋವರಂಗಳಿಂದೆಸೆವ ದೇಶಂಗಳಂ ನೋಡುತ್ತುಂ ಕುಱುಕುಱುಮೆಟ್ಟುತ್ತುಂ ಬರ್ಪರೂಪಕಂದರ್ಪನಂ ಮಕರಂದನಿಂತೆಂದಂ:—　　　　　　　॥ ೪೬॥

ಧವಳಾಬ್ಜಸಿತಚ್ಛತ್ರಂ ।
ನವೀನಕಳಹಂಸಧವಳಚಾಮರನಿದಿರ್ವ ॥
ರ್ಪವ್ರೊಲೆಸೆವಂ ನಿನಗುತ್ಪಲ ।
ಧವಲಂ ಶರದವನಿಪಾಲಕಂ ಕವಿಧವಳಾ ॥　　　　　　　॥ ೪೭॥

ತೋಱಿ ಪೊಸಬಾಸೆವೊಲ್ ಪಸು ।
ರೇಱಿವವನಲೇಖೆ ತೋರವೊಲೆ ಬೆಳ್ಮುಗಿಲಂ ॥
ಪೇಱಿದ ಗಿರಿಯೆನೆ ಜವ್ವನ ।
ವೇಱಿದ ಪ್ರೊಲ್ ಧರಣಿಕಾಂತೆಯೇನೊಪ್ಪಿದಳೋ ॥　　　　　　　॥೪೮॥

ಸರಸಿಜದೆಲೆಯುಂ ರಜಮುಂ ।
ಸುರಧನುವನೆ ಪೋಳೆವ ಮೀಂಗಳೆಳಮಿಂಚನೆ ಪೋ ॥
ಲ್ತಿರೆ ಪೋಲ್ತುವು ಪೆರ್ಗೆಱೆಗಳ್ ।
ಶರದಂ ಪೊಯೆ ಪರಿದು ಬಿಟ್ಟ ಮುಗಿಲನಧೀಶಾ ॥　　　　　　　॥೪೯॥

ಪಸರಿಸಿದ ಬಯಲ್ಮಡು ಪೊ ।
ವಸೆಗೊಂಡಿರೆ ಗಡಣದಾಡುವೆಳವೆಂಡಿರ್ ನು ॥
ಣ್ಬಸಲೆಯೆ ಗೆತ್ತೆಯ್ತರೆ ಮಗು ।
ಳಿಸಿನಪ್ಪವು ಪಾಱಿ ಪ್ರೊಳೆವ ಪಾಠೀನಂಗಳ್ ॥ ॥೫೦॥

ಮಡುಗಳೊಳ್ ನೀಳ್ದ ನೀರ್ಗ ।
ನ್ನಡಿಯೊಳ್ ನಗೆಮೊಗದ ಚೆಲ್ವನವಲೋಕಿಪವೋಲ್ ॥
ಲಿಡಿದಡರೆ ಕೊಂಡ ಫಲದಿಂ ।
ಕಡುವಾಗಿದುವರಸ ಗಂಧಶಾಲಿವನಂಗಳ್ ॥ ॥೫೧॥

ಕಾಲ್ವಿಡಿದು ಕೆಳಗೆ ಪೊಸನೆ ।
ಯ್ದಿಲ್ಗಳ್ವಾಗಳ್ ಬಾಯನಾಂತವೋಲಿರೆ ಕಂಪಂ ॥
ಸಾಲ್ವನಿತುಗಲುಗುಳ್ದಪ್ಪವೆನೆ ।
ಚೆಲ್ವಿಂ ಬಾಗಿದುವು ನೋಡಿ ಕಳಮವನಂಗಳ್ ॥ ॥೫೨॥

ಪಿನತನವಗಂಧಶಾಲಿಯ ।
ತೆನೆಗಳನೊಳಕೊಂಡು ಮುಗಿವ ಕುಮುದಂಗಳ್ ನೋ ॥
ಡನುಕರಿಸಿದಪ್ಪುವು ತೀವಿದ ।
ತನಿಗಂಪಂ ಪೀರ್ವ ತೆಱದಿನುನ್ನತನಿಳಯಾ ॥ ॥೫೩॥

ಹರಿತದಳಪಾಕಪರಿಪಿಂ ।
ಜರಕಣಿಶವಿಕಾಸಕಳಮವನಕವನಿಪ ನೋ ॥
ಡರಗಿಳಿಯ ಪಿಂಡು ಪಾಯ್ವುದು ।
ಮರಳ್ದು ಸಮವರ್ಣರುಚಿಗೆ ಪಾಯ್ದೊಱಗುವವೋಲ್ ॥ ॥೫೪॥

ಕೆಮ್ಮೀಸೆವಿಟ್ಟ ಗಿಳಿಗಳ್ ।
ತಮ್ಮಂ ತುಡುಕದವೊಲಾಯುಧಂಬೇಱಿವವೋಲ್ ॥
ಕವ್ಮಗೆಱವೆಗಳನಂಗನ ।
[1]ಕಮ್ಮಕದಂತೆಸೆವುವೊಸೆಗು ನೋಡಿವನರಸಾ ॥ ॥೫೫॥

ಪಾ— 1 ಕವ್ಮಟ. ಗ॥; ಕಮ್ಮತ. ಚ॥

ಸಂಪಗೆವಣ್ಣ ಮನುಗುಚ್ಛೈಳ ।
ಗೆಂಪ್ರೇಂದಿದ ಪಸುರನಾಳ್ದ ತುದಿನಡುವೊದಲೆಂ ॥
ಬಿಂಪುಳ್ಳೈಸಳ್ಗಳ ಮೆಯ್ಯಿಂ ।
ಕಂಪಂ ಕೆದಱುವದ್ರವರಸ ಕಱಮೆಯು [1]ಕೆಯ್ಗಳ್[1] ॥　　॥೫೬॥

ಬಗ್ಗಿಳಗಳ್ ಬೞಲ್ದು ತೆನೆಗಳ್ ತೊನೆಯುತ್ತಿರೆ ಪಾಯ್ದು ಪಾಯ್ದು ಪಾ।
ಲ್ಕೈಲ್ಗಳನಗ್ರತುಂಡದೊಳೆ ಖಂಡಿಸೆ ಗಲ್ಗಲನೊಕ್ಕ ಪಾಲ ತಂ ॥
ದಲ್ಗಳಿನಾವಗಂ ಮಡಿಯ ನೀರ್ ಕಡುವೆಳ್ಪನೊಳೊಂದೆ ಪದ್ಮಜಂ ।
ಪಾಲ್ಗಳ ಪೊಯ್ದು ಪೊಯ್ದು ಬಳೆಯಿಪ್ಪವೊಲಿರ್ದುವು ನೆಲ್ಲಗದ್ದೆಗಳ್॥೫೭॥

ವ॥ ಎಂದು ಮಕರಂದನೋರಂತದಿಂ ಪೊಗೞ್ದು ಪಲತೆಱದಿಂ ಪೊಲನ ಸಿರಿಯನರಸಂಗೆ ನಿರವಿಸುತ್ತುಂ ಬರೆವರೆ ಮುಂದೊಂದೆಡೆಯೊಳಡಿದು ಪಾಲೊಗ್ಗಳ್ವ ಪವನಾಗಿ [2]ಕಣ್ಮಲೆಗೇರ್[2]ಕೋದಾರವಾದ ಕೇದಾರದೊಳ್ ॥೫೮॥

ಅನಿಲಾಯತೊತ್ತೀಕ್ಷ್ಣಲಚಾತ್ರಿಳಿಯೊಳ[3]ವಯವದಿಂ[3] ಪಾಯ್ದು [4]ಕಾಲ್ ಜಾಱಿ[4] ತೂಗುಂ । ಬೆನೆಯಂ ತಳ್ಕೈಸಿ ಕೀರ್ಕೀರ್ರೆನುತಡಿಗೆಸಱೊಳ್ ಬೞ್ದು ಬಲ್ಗೆಡ್ಡೆಯಂ ಸಾ ॥ ದೊರ್ಸಲುತ್ತಚ್ಚಾಂಬುವೊಳ್ ಚುಂಬಿಸುವ ಕಣಿಶ ಮಂ ಕಚಿ್ ತುಂಡಾಗ್ರ[5]ಮಂ[5] ನೂ । ತನಪಕ್ಷಪ್ರಾಂತದೊಳ್ ಮಾದೊರ್ ಡೆದುದು ಧೃತಜಂಬಾಲಮಂ ಬಾಲಕೀರಂ ॥　　॥೫೯॥

ವ॥ ಅದಂ ನೋಡಿ ನಕ್ಕು ಅತಿತರಳಂಗೆ ಕೈಸಾರ್ದ ಕಜ್ಜಮುಂ ಕಿಡುವು ದಾವಕೌತುಕವೆಂದು ನುಡಿಯುತ್ತುಂ ನಡೆಯೆ ನಡುವೊಲಕ್ಕೆ ತೊಡವೆ ನಿಸಿ ಪಱಿ ಕೊಂಡಲುಗುವ ಸುಱು ಪುಱಿಕ್ಕುವಂತಿರ್ದ ಪೆರ್ಬಟ್ಟೆಯ ಪುಱಿನೊಳ್ ॥　　॥೬೦॥

ಕೀರ್ಣಪರಾಗಪಿಂಜರಿತತೀರಜಳಂ ಪೊಳೆಯುತ್ತುಮಿರ್ಪ ಸಾ ।
ವರ್ಣಸುಪತ್ರದಂತೆಸೆಯೆ ತೀವಿದ ಕೈರವಕಂಜಸಂಕುಲಂ ॥

---

ಪಾ— 1 ತೆನೆಗಳ್. ಗ॥　2 ಕಣ್ಮೆರೆಗೇ. ಗ॥　3 ವಚರದಿಂ. ಗ॥
4 ಕಾಲ್ಗೋಡೆ. ಗ॥　5 ದಿಂ ಕ॥

ಪೂರ್ಣಪಯೋಜಪುಂಜಕುಮುಬೋತ್ಕರದಂತಿರೆ ಧಾರಿಣೀಶನ ।
ತ್ಕರ್ಣದ ಚೆಲ್ವನಾಂತತಿಮನೋಹರವಾದದು ನೀರಜಾಕರಂ ॥೬೧॥

ತುಂಬಿಯ ಬಣ್ಣಮುಂ ಕಱಿಯ ನೆಯ್ದಿಲ ಬಣ್ಣಮುಮುಂಚೆವಿಂಡ ತ ।
ಳ್ತಂಬೆಳರ್ವಣ್ಣಮುಂ ಬಿಳಿಯ ಕಂಜದ ಬಣ್ಣಮುಮೊಂದಳುಂಬಮುಂ ॥
ತುಂಬಮುಮಾಗೆ ತಿಂಬಿದುದು ಕಟ್ಟಲೆಗಂ ಶಶಿಕಾಂತಿಗಳ್ಗಮಾ ।
ಅಂಬುಜಷಂಡಮಾಜಗದೊಳಿಲ್ಲದ ಕೂಟಮನುಂಟುಮಾಳ್ಪವೋಲ್ ॥೬೨॥

ವ॥ ಎನೆ ಕಮನೀಯಮಾದ ಕಮಳಾಕರನುಮಂ ಕುಮಾರನ ಪಥಪರಿಶ್ರಮಪರಿಮ್ಲಾನಮುಖಕಮಲಾಕರಮುಮಂ ಕಂಡು ಮಕರಂದಂ ಕಡೆಗಣಿಸಲಱಿಯದೆ ॥ ॥೬೩॥

ಗಿಳಿಗಳ್ ಬಿಟ್ಟವು ಗಂಧಶಾಲಿವನಮಂ ಗೋಪೀಕಪೋಲಾಗ್ರದೊಳ್ ।
'ಬ'ಳೆಯುತ್ತಿರ್ದುವು ಘರ್ಮವಾಃಕಣಿಕೆಗಳ್ ಪದ್ಮೋತ್ಕರಕ್ಕಂಚೆಗಳ್ ॥
ತಳರುತ್ತಿರ್ದಪುವೊಪ್ಪಿ ಚೆಪ್ಪಸಲೆಯಿಂ ನೀರ್ದಾಣಮಂ ಸಾರ್ದು ಗೋ ।
ಕುಳಮಾಪೋಮುದು ಕಾಯ್ದಪಂ ತಪನನುತ್ತೀವ್ರಂ ಲಲಾಟಂತಪಂ ॥೬೪॥

ವ॥ ಅದುಕಾರಣದಿಂ

ಬಿಸಿಲಿಱಿವನ್ನೆಗಮಿರ್ದೀ ।
ಬಿಸರುಹವನದೊಳ್ ಬಟಿಲ್ಕೆಯುಂ ಕಳೆದು ಬೞಿ ॥
ಕ್ಕಸಮಾಸ್ತ್ರರೂಪ ಪೋಪಂ ।
ರಸಿಕಂ ನನಲಲಿತವಸ್ತುವಂ ಬಿಸುಡುವುದೇ ॥ ॥೬೫॥

ಪ್ರಿಯಸಖನಿಂತೆನೆ ಸಲಿಲಾ ।
ಶಯಕ್ಕೆ ತದ್ರಾಜಹಂಸನೆಯ್ದನೆ ಮುದಿತಾ ॥
ಶಯನಾಗಳ್ ನಡೆದಂ ಬಗೆ ।
ಬಯಸಿದುದನೆ ನುಡಿಯೆ ನೆಗೞಲೊಲ್ಲದರೊಳರೇ ॥ ॥೬೬॥

ವ॥ಎಂದು ನಡೆದಾನಳಿನಾಕರದೊಳ್ ತಱಂಗೊಂಡು ತುಱುಗಿ ಕವಲ್ತ ಕಿಱುಗೊಂಬುಗಳ ಪಬಿಂ ಸುಬ್ಬುಗೊಂಡು ಶೋಭೆಗೆ ಪಿರಿದಾದ ಜಾದಿಯ

ಪಾ— 1 ಪೊ. ಗ॥

ಪೊದಱ್ದ ಪೂವಱ ಸುತ್ತಿಂ ಸೊಗಯಿಸಿ ನೀರ್ಗುಡಿಯಲ್ ಗಡಣದಿಂ ಬಂದು ಬೞಿಲ್ದ ಕುಳ್ಳಿರ್ದ ಪಾಪುರಿಯರ ಪೆಸರ್ಗುಡಿಯಿನಲ್ಲೊಕ್ಕು ನಸುವಾಡಿದ ನೆಲ್ಲ ನಿಡುವೊಡೆಗಳಿಂ ತುಱುಕಾರ್ತಿಯರ್ ತಿಱಿತಂದು ಪಾಱುತನಕ್ಕೆ ಪರಪೆ ಪರೆದು ಕೊರಗಿರ್ದ ಕಱಿಯನೆಯ್ದಿಲ್ಗಳಿಂ ಅವಂದಿರ್ ಬೀಸಿ ಬಿಸುಟೆ ಕಂದಿ ಕೆದಱಿರ್ದ ಪತ್ರಂಗಳಿಂ ಪಥಿಕರ್ ಪಾಸಿ ಪಟ್ಟಿರೆ ನಸುನಾಸಿದ ಪೂಸದಳಿರ ಪಸೆಗಳಿಂ ಮನೋಹರಮಾದ ಮಾಧವೀಮಂಟಪದ ಮೊಗಸಾಲೆಯೊಳ್ ಕುಳ್ಳಿರ್ದು ತೆಂಗಾಳಿಗೆ ಮೆಯ್ಯನೊಡ್ಡಿ ಬೆಸರನಾಱಿಸುತ್ತುಮರಸನಿರ್ದುದುಂ ಪದ್ಮಪತ್ರಪುಟಕೆಯಿಂ ಕುಳಿರ್ವ ತಿಳಿನೀರ್ಗಳುಮಂ ಕಮಳಮೃಣಾಳಂಗಳುಮಂ ಮಕರಂದಮಂ ತಂದು ನೀಡೆ ಬೇಡೆಂದು ಮನೋಹರತೆಗೆ ಮನವೆಳದುವರಿಯೆ ಮಾನವಮದನಂ ತಾನೆ ಪೋಗಿ ಪೂಗೊಳನಂ ಪೊಕ್ಕೂರುಫಲಕಮಂ ಪಳಿಕಿನ ಸೋಪಾನಕ್ಕೆ ಪಕ್ಕುಮಾಡಿ ಸೀವರದ ಸಿರ್ಪನಿಗಳ್ ಪನಿತು ಶರೀರದೊಳ್ ಪುಳಕಮಂ ಪುಟ್ಟಿಸೆ ತೆರೆಗಳ್ ತೊಡೆಯನಪ್ಪಳಿಸೆ ನೀರೊಳಗೆ ಕಾಲಂ ನೀಡಿ, ॥ ೬೭ ॥

ಅಗಲೆ ಮಿಗೆ ನೂಂಕಿ ತಪ್ಪಿಂ ।
ಬುಗಳಂ ತಳದಲ್ಲಿ ಕುಳಿರ್ವ ನೀರ್ಗಳನಾಗಳ್ ॥
ಮೊಗೆಮೊಗೆದು ತೆಗೆದು ಭೂಪಂ ।
ಮೊಗಮಂ ತೊಳೆವುದುಮನಂತರಂ ಸಚಿವಸುತಂ ॥ ॥ ೬೮ ॥

ಜಲಬೋೞೊಲೆದಲೆವ ತಾವರೆ ।
ಯೆಲೆಯೊಳ್ ತೆಗೆದಿಕ್ಕಿ ನಾಲ್ಕು ದೆಸೆಗಂ ನೀರ್ಗಂ ॥
ಬಲಿಗೆದಱಿ ಬೞಿಕೆ ಜಲರುಹ ।
ದಲರ್ಗಳುಮಂ ಬಿಟ್ಟು ಕವಿಯೆ ಕಂಪಿಂಗಳಿಗಳ್ ॥ ॥ ೬೯ ॥

ಬಗಿದಗುೞೊಂದದಂತೆ ತೆಗೆದಾಱಿಸಿದೋಗರದೊಳ್ ಪೊದಱ್ದ ಕ ।
ಮ್ಮಗೆ ಕೆನೆಗೊಂಡ ಗಿಡ್ಡಮೊಸರಂ ಸುರಿದೇಲೆಯ ಚೂರ್ಣವಿಕ್ಕಿ ಪೊ ॥
ಯ್ದೊಗುಮಿಗೆ ಬೇಳೆಗೆಯ್ದು ಮೆಳಸಂ ತಳದಲ್ಲದ ಚಲ್ಲಿಯುಂ ಪದ ।
ಣ್ಬಗೆ ಕಲಸಿರ್ದ ತಣ್ಗಲಸುಗೊಟ್ಟನಿಳಾಪತಿಗಿತ್ತನಟ್ಟಿಯಿಂ ॥ ೭೦ ॥

ಪಿಪ್ಪಲಿ ಚಲ್ಲಗಾಯ್ ಮೆಣಸು ಮಾಗುಳಿವೇವೊರ್ಗಳ್ ಪುಲ್ಲವೇಲೆ ಕ ।
ಮ್ಮಿಪ್ಪ ಸುಭದ್ರೆ ಮಾಮಿಡಿ ಕರಂ[1]ಜಿಕೆ[1]ಯಂಬಟೆ ನಿಂಬೆ ನೆಲ್ಲಿಗಾಯ್ ॥
ಕಪ್ಪುರಗಂಪನೊಪ್ಪಿಸುತುಮಿರ್ಪರೆವೂದುಫಲಂಗಳಾದಿಯಾ ।
ದುಪ್ಪಿನ ಕಾಯ್ಗಳಂ ಮಗಮಗಿಪ್ಪವನಿಕ್ಕಿದನಬ್ಜಪತ್ರದೊಳ್ ॥೨೦॥

ವ॥ ಅಂತಿಕ್ಕುವುದುಂ;

ಆರೊಗಿಸಿ ನೃಪಸುತಂ ಕ ।
ರ್ಪೂರದ ವೀಳೆಯಮನೊಸೆದುಕೊಂಡಸವಸದಿಂ ॥
ಸಾರಸ್ಮೃದುಪಲ್ಲವಪ್ರ ।
ಸ್ತಾರದೊಳಾಲತೆಯ ಮನೆಯೊಳೊಱಗಿದನಾಗಳ್ ॥ ॥೨೧॥

ಭುಕ್ತಾಭ್ಯವಹಾರಂ ಪತಿ ।
ಭಕ್ತಂ ಬಂದಾರ್ಯರ್ತನಯನವನಿಪಚರಣಾ ॥
ರಕ್ತಾಂಬುಜಸಂವಾಹನ ।
ಸಕ್ತಂ ಸುಖದಿಂದಮಿರ್ದನಿರ್ಪನ್ನೆವರಂ ॥ ॥೨೨॥

ಮೂಡ ನೆೞಲ್ ಮಿಗೆ ಕವಿದುದು ।
ಕೋಡುವ ಮೊಲ್ಲಗ್ಳ ತೀಡಿದುದು ಕಡುವಿಸಿಲಿಂ ॥
ಪಾಡಱಿದ ಸಸಿಮೊಗಂಗಳ್ ।
ಕೂಡೆ ನಯಂಬಡೆದುವಲರ್*ದವಡವಿಯ ಪೂಗಳ್ ॥ ॥೨೪॥

ವ॥ ಆಗಳಾಸಮಯಮನವಲೋಕಿಸಿ,

ತಣ್ಬೊಟ್ತಾದುದು ತಳರ್*ದುದು ।
ನುಣ್ಬುಸಲೆಗೆ ಹಂಸಮಿಥುನಮುತನುವ ಸರಲಿಂ ॥
ಪ್ರಣ್ಬೇಱುವ ಪಾಮರಿಯರ ।
ಕಣ್ಬೆಳಗಿನ ಮಜ್ಜನಕ್ಕೆ ನಡೆ ನೃಪತಿಳಕಾ ॥ ॥೨೫॥

ವ॥ ಎಂದು ನುಡಿದಮಾತ್ಯಸುತನ ಮಾತಿಂಗಲ್ಲಿಂದಮೆೞ್ದು ಸಮುದ್ಧಳಿತ ಸನಾಳನೀಲೋತ್ಪಲನಳಿನನಿಳಯೀಕೃತಕರಕಮಲನತಿಲಲಿತಲೀಲಾಲಸಗಮನನಾಗಿ ಕಂದರ್ಪದೇವಂ ಬರೆ ಕಿಱಿದಂತರದೊಳ್ ॥೨೬॥

---

ಪಾ— 1 ಡಿಗೆ. ಗ॥

ಆವಲಲರ್ದಾಯ್ದು ಕೞಿಪಿಯು |
ಪೂವ್ರೊಡೆಯುಂ ಮುಡಿಯೆ ಬಿಗಿದು ಬಿರಿಯಿಸಿ ನೆಯ್ದಿ ||
ಲ್ಪೂವ್ರಡಿಯನೆತ್ತಿ ಬೈತಲೆ |
ದೀವ್ರುವ ಪಾಮರಿಯುರಂ ಮಹೀಪತಿ ಕಂಡಂ || ||೭೭||

ವ|| ಅಂತು ಕಂಡಿದು ಬಿನದವುಂ ಕಾನಂದವಲ್ಲದೆ ಗಿೞಿಯುಂ ಸೋವಂ ದವಲ್ಲೆನುತುಂ ಪ್ರೋತರ್ಪಂಗೆ ಬಲಗೆಲದೊಳ್ ಜೆಳೆದೋಗಿದ ಕಾಮುಕಾನ ನದ ಮುಂದೆ ಮಂದೈಸಿಗ ಜಾದಿಯ ಮೆಳೆಗಳ ಬಳಸಿಸಿಂ ಪ್ರೆಳೆವ ಪಾಳಿ ಯುಂ ಮೆಟ್ಟಿ ನಿಂದು, ||೭೮||

ನಲವಿಂದಂ ಸೂಡಿ ಪೊಂಜಾಡಿಯ ನಿಡುನನೆಯುಂ ವೇಣಿಯೊಳ್ ಸೆಕ್ಕಿಕೊ ಯ್ದಾ|ವಲ ಪೂವಂ ಗಂಧವಿಟ್ಟುತ್ಪಲದಸಿಯೆಸಳಿಂ ಕಂಜಕಿಂಜಲ್ಕಮುಂ ಬೈ|| ತಲೆಯೊಳ್ಪ್ಪಯ್ದೊಟ್ಟಿಯೊಳ್ಬೆಂಡುಗೆಯ ವಲಯಮುಂ ತೊಟ್ಟು ಕೈಗೆಯ್ದು ಕರ್ಣೋ[1] | ತ್ಪಲಮುಂ ಕೈಗೆಯ್ದಿನಂ ಕಣ್ಮಲರಿನರಸನಂ ನೋಡಿದಳ್ ಗೋ ಪಿಯೊರ್ವಳ್ || ||೭೯||

ಬಳೆಗಳ್ ಘಲ್ಲೆನೆ ತೋಳ್ಗಳಂ ನೆಗಪಿ ಕಾಲಂ ಸ್ವಸ್ತಿಕಂಗೊಟ್ಟು ಕೆಂ | ದಳಮುಂ ಮೆಲ್ಲನೆ ಪೊಯ್ದು ಪಾಯ್ದು ಗಿಳಿಯುಂ ಸೋವಾಕೆ ತುಂಗಸ್ತನಂ || ಗಳುಮಾಲೋಕಿಪವ್ರೊಲ್ ಮರಲ್ದುಗಿಯೆ ತಳ್ತೊಂದೊಂದಱೊಳ್ ಪಾ ಯ್ದು ಕ | ಣ್ಣೊಳಮಿಂಚಂ ಮುರಿದಂತಿರೊಪ್ಪೆ ಮುರಿದಾಭೂಪಾಲನಂ ನೋ ಡಿದಳ್ || ||೮೦||

ವ|| ಮತ್ತಮೊರ್ವಳ್

ಎಡಗಯ್ಯೊಳೆತ್ತಿ ಮುಡಿಯಂ |
ಪಿಡಿ ತೆಕ್ಕನೆ ತೀವೆ ಕೊಯ್ದು ಜಾದಿಯ ನನೆಯಂ ||
ಮುಡಿಯುತ್ತೆ ನಿರೀಕ್ಷಿಸಿದಳ್ |
ಕಡೆಗಣ್ಣಿಂ ಕಳಮುಗೋಪಿ ಭೂಪಾಲಕನಂ || ||೮೧||

ಪಾ— 1 ಳಂ. ಕ|| ಗ||

ವ|| ಆಗಳ್ ಮುನ್ನಂ ತನ್ನ ಮನಮಂ ನಟ್ಟ ಕನ್ನೆಯ ಕಣ್ಗಳ ಕೆಳೆಗ ಳೆಂಬ ಮುಳಿಸಿಂ ಮಱವಂತೆ ಬಿಳಿಯ ಕಣ್ಣ ಬೆಳಗಯ್ಯಂತಿರ್ದ ಬೆಳ್ನೆ ಯ್ದಿಲ ಬೆಂಚೆಯಂ ಪೊಕ್ಕು ಪೂವಂ ಮುಱಿದು ||೮೦||

ಎಯ್ದವೆ ಪಾಸಲುಂ ಪೊದೆಯಲುಂ ನಿಮಗೆಮ್ಮ ಪೊದಟ್ಟಿ ನೀಳ್ದ ಕ |
ರ್ನೆಯ್ದಿಲ ಸ್ರ್ಯಗಳೇಕೆಲವ್ರೊ ಕೊಯ್ದಪೆ ನೆಯ್ದಿಲನೆಂದು ಪ್ರ್ಯಟ್ವಿವ್ರೋಲ್ ||
ನೆಯ್ದಿಲ ಮಾಲೆಯಿಂ ಕಳಮಗೋಪಿಯುರೀಕ್ಷಿಸೆ ಮಾಣ್ದನಂತೆ [1]ಚೆ |
ನ್ನೆ[1]ಯ್ದಿಲನಾಯ್ದುದಂ ಮಱೆದವಂದಿರನೀಕ್ಷಿಸಿದಂ ಕುಮಾರಕಂ ||೮೩||

ವ|| ಅಂತೊಂದೆಡೆಗೆ ಬಂದು ನೆರೆದು ನೋಡುವ ಕಾಮನ ಕಾಪಿನವರಂತಿ ರ್ದ ಗೋಪಿಯರಂ ನೋಡಿ ಮನದೊಳ್ ಮೆಚ್ಚುತ್ತುಂ ಪೋಗೆವ್ರೋಗೆ ಪೂವೆಂ ಚೆಯಿಂ ಪೊಱಮಟ್ಟಂಚರಮನುಡುಗದೆ ಪರಿದು ಮುತ್ತುವಮತ್ತಮರಾಳಂಗ ಳುಮಂ, ಸುೞಿದು ಸುತ್ತಿ ತಮ್ಮೊಳಗೆ ಮುಮ್ಮಟ್ಟಿಗೊಂಡು ಲವಲವಿಸಿ ಕರೆ ವ ಲಾವುಗೆಗಳುಮಂ, ಕುಟುಕನುಗುಟ್ಟಿ ಕಂಠಮಂ ತೂಗಿ ತೊನೆದು ನ ಡೆದು ನಲಿನಲಿದು ನೆರೆದು ಕೂಜಿಸುವ ಕಪೋತಂಗಳುಮಂ, ಪಾಯ್ದು ತೆನೆ ಯಂ ತುಡುಂಕದೆ ತಲೆಯನೊಱಗಿ ಕೊಂಡಾಲಿಸುವರಗಿಳಿಗಳುಮಂ, ಎಳಸಿ ಬಳಸಿ ಬಲವಂದು ನಲಿದುಱುವಾಱಿ ಮೆಲ್ಲಳಸಂ ಪರಪುವ ಪುರುಳಿಗಳುಮಂ, ಮುಸಗಿ ಮುಸುಱಿ ಕುಣಿಕುಣಿದು ಕುಕಿಲ್ವ ಕುಕಿಲ್ಗಳುಮಂ, ಬಟ್ಟೆಯಂ ಬಿಟ್ಟು ಬಱಿಲ್ದ ನೆವದಿಂ ನವಶಾಡ್ವಲಪ್ರದೇಶದೊಳ್ ಕುಳ್ಳಿರ್ದು ಕೇಳ್ದು ಕೇ ಳ್ದು ಪರವಶರಪ್ಪ ಪಥಿಕರುಮಂ, ಕಂಡಿದೇನೆಂದು ಮಾನವಮದನಂ ಮಕ ರಂದನುಮನುಮಾನಿಸುತ್ತುಂ ಬರೆ ಮುಂದೆ ಮಂದೈಸಿ ತಲೆಯುದ್ದಮಾಗಿ ತುಱುಗಿ ಬೆಳೆದೊಱಗಿ ರಾಜಿಸುವ ರಾಜಾನ್ನದ ಕುಸುಂಕುಱೊಳಗೆ ||೮೪||

ಕುಮುದದ ಕೇಸರರಜಮಂ |
ತೆಮಳ್ದು ತಳ್ಕೈಸಿ ನೆಗೆವ ಸುಟ್ಟುಱಿಯಿಂದಂ ||
ಸಮತಳಹತಿಯಿಂ ಕುಚಕಂ |
ಕುಮರಜ[2]ಮಡರ್ದ*ಂಗದಲ್ಲಿ[2] ಪಲ್ಲವಿಸುವಿನಂ || ||೮೫||

---

ಪಾ— 1 ಬೆಳ್ನೆ. ಗ|| 2 ಮಮರ್ದಂದಮಲ್ಲಿ. ಗ||

ಬಱಗಿದ ಕಟಿವೊಯು ಕಂಪಿಂ ।
ಗೆಱಗಿದ ಮಱಿಮುಂಬಿ ಸಮರತೋತ್ಕಟರಸದಿಂ ॥
ಪೆಱೆನೊಸಲೊಳಲೆವ ಕುರುಳಂ ।
ಪಱಿವಱಿದೀಡಾಡುವಂದಮಂ ನೀಡುವಿನಂ ॥ ॥೮೬॥

ಅನಿಲಹತಿಯಿಂದೆ ತುಂತು ।
ರ್ವನಿಗಳ್ ಪರಿಸೀರ್ಗಳಂಸಮೊಗೆದುದ್ಧತಮೋ ॥
ಘನಹತಿಯಿಂ ಝಲ್ಲೆನೆ ಮೋ ।
ಗೆ ನೆಗೆದ ತೆಳ್ವದದ ಸೀವರಮನೆಱಸುವಿನಂ ॥ ॥೮೭॥

ಕೃತಕಕೂಜತ್ಕಂಠನಾನಾವಿಧಕಲಮಣಿತಂ ಘುಲ್ಲಗಲ್ಲಪ್ರಹಾರೋ । ದಿತನಾದಂ ಗ್ರಂಥಿಸಂಘಟ್ಟನಪಟುರಣಿತಂ ಪ್ರೋತ್ಥಿತಾಹಸ್ತಸಂತಾ ॥ ಡಿತವುನ್ಮೋನ್ಮುಕ್ತಘೋಷಂ ಸಮತಳಹತನ್ಮೈತಂಬಬಿಂಬಾರವಂ ದಿ । ಕ್ತತಿಯಂ ತಳ್ಳೈಸಿವೇಗೋದ್ಧತರತಿ ಮೆಱೆವಳ್ಗ್ಗೀಪನೊಳ್ಗ್ಗೀಪಿಯೊರ್ವಳ್॥೮೮॥

ವ॥ ಅದಂ ಕೆಳಗಿವಿಗೇಳುತ್ತುಂ ಮಕರಂದನ ಮೊಗಮಂ ನೋಡಿ ಮುಗುಳ್ನಗೆನಗುತ್ತುಂ ಈಕ್ಷಿಸುವ ವಿಟನಿಕರಮಂ ನೆರಪ್ರವಂದಮಲ್ಲದಿದು ನೆರೆವಂದಮಲ್ಲೆಂದು ನುಡಿಯುತ್ತುಂ ನಡೆಯೆನಡೆಯೆ ॥೮೯॥

ಪೊವಸೆ ಪಱ್ರ[1]ಗೊಂಡ[1] ಪುಳಿನಂ ಜಘನಂ ಗಿಳಿ ತಿಂದ ತೊಂಡೆ ಕೆಂ ।
ಪೊವರಿಸಿರ್ದ ಪುಣ್ದುಟಿ ವಯಃಪವಪದ್ಧತಿಗಳ್ ನಖಕ್ಷತಂ ॥
ಪೂವಿಡಿದಿರ್ದ [2]ತೀರಕುಜಜಾಲ[2]ಮಲಮರ್ಱಡಿಯಾಗೆ ಸೂಳ್ವೋಲ್ ।
ಶೈವಲಿನೀವಿಲಾಸಿನಿ ಕರಂ ಮಱೆನಳ್ ಶಫರೇಕ್ಷಣಂಗಳಂ ॥೯೦॥

ವ॥ ಆತೊಱೆಯ ತಡಿಯೊಳ್

ಬೇಲಿಯನೇಂ ಕಿತ್ತನೊ ಬಾ ।
ಳ್ವೇಲಿಯೊಳಲರಂಬನಂಬಿನಾಗರಕೆನೆ ಬೆ ॥
ಳ್ಪ್ವೇಲಗಿಸೆ ನನೆಯ ಜಾದಿಯು ।
ಸಾಲೇಂ ಸುತ್ತಿದುವೊ ಪುಷ್ಪವಾಟಾವಳಿಯುಂ ॥ ॥೯೧॥

ಪಾ— 1 ಗಂದು. ಕ॥ ಚ॥ ಗ॥ 2 ಪೀರ್ವ ಶಿಕುಜಂಬುದಳಂ. ಗ।

ವ॥ ಅಲ್ಲಿ ಪ್ರೋಕ್ಕಿವರ್ಗರುಂ ಬಿರಿಮುಗುಳ್ಗಳಂ ನನೆಗಳಂ ತಿಱಿದು ತುಱುಂಬಿ, ತಡಿ ವೊಱಿಕಾಲುದ್ದಂ ಕಿಱು।

ದೊಡೆಯುದ್ದಂ ಪೋಗೆವೋಗೆ ಪೆರ್ದೊಡೆಯುದ್ದಂ ॥
ನಡುನೀರೆನೆ ಪಾಯ್ದರ್ ಕಾ ।
ಲಡಿಗಳ ನುಣ್ಮಳಲನರಿದು ಪರಿವಾನದಿಯಂ ॥ ॥೯೩॥

ಪಾಕಕುಶಕಾಶವಿಶದಂ ।
ಕಾಕಾಂದೋಳಾತ್ಮಗುಪ್ತ್ಯಲಾಬೂನಿಗರ್ಗಂ ॥
ಡೀಕೃಷ್ಣಲಾವುರೀಬಿಂ ।
ಬಾಕೀರ್ಣಂ ತನ್ನದೀ[1]ತಟಂ[1] ಕಡುರಯ್ಯಂ ॥ ॥೯೪॥

ಆನದಿಯ ತೀರದೊಳ್ ಸುರ ।
ಧೇನೂಪಮಧೇನು ತಳ್ತತೋಷಂ ವಿಹಿತಾ ॥
ನೂನಮದವೃಷಭಪೋಷಂ ।
ತಾನಿರ್ಪುದು ವತ್ಸವಿಪುಳಘೋಷಂ ಘೋಷಂ ॥ ॥೯೫॥

ಕಱುವಂ ದೂರಿಸಿ ಮೊಲ್ಲನೊಕ್ಕು ತುಱುವಂ ತಾಯ್ಗಾಡಿನೊಳ್ಬಿಟ್ಟವುಂ।ದುಱುವಾಯ್ತರ್ಪೆಗಳಗಂದಿಗಳ್ ತೊಱೆನು ತೋರಂಬೆತ್ತ ಬಲ್ಗೆಚ್ಚಲೊ ॥ ಳ್ಪೊಱೆಯಂ ಪೆರ್ದೊಡೆಯಿಂದಿಱುಂಕಿ ಮೊಲೆಯಿಂ ಪಾಯ್ತರ್ಪಪಾಲಿಂದೆ ಪಾ । ಲ್ದೊಱೆಯಂತಾತೊಱೆಯಪ್ಪುದೆಂದೊಡದನಿನ್ನೇನೆಂದು ಬಣ್ಣಿಪ್ಪುದೋ ॥ ॥೯೬॥

ತುಱು ನೀರ್ಗೆ ಕವಿವೊಡಂತಾ ।
ತೊಱೆ ಪರಿಯುಡುಗಿರ್ಪುದಿನಿಸುಬೇಗಮದೆನಲಾ ॥
ತುಱುಪಟ್ಟಿಯ ತಱುಗಳನೇ ।
ತೆಱದೊಳಮಾಂತೆಱೆಯೆ ನೆಱೆಯೆ ಪೊಗೆಟಿಲ್ ನೆಱೆಯೆಂ ॥ ॥೯೭॥

ಪಂಕಿಲಮಾಗಿ ಗೋಕುಲದ ಗೋಮಯದಿಂ ನಕೆಗೊಳ್ವ ಘಾತದಿಂ ।
ದಂ ಕದಡಾಗಿ ಮೆಲ್ಕಿಱಿವ ಮೆಲ್ಕೊರೆಯಿಂ ನೊರೆಯೇಱು ಮೂತ್ರದಿಂ ॥

---

ಪಾ— 1 ನಷ್ಟಂ. ಕ॥

ದಂ ಕಡುಪೂರಮೇೞು ಬಿಡೆ ಬಂದವ್ರೊಲಾತೊಱೆಯಂನಕಾಲಕೂ ।
ಲಂಕಷಮಪ್ಪುದುಂ ಕೆಳಗೆ ಪಾಯ್ದು ಪಸುವ್ರಜಮಿಾಸಿ ಬರ್ಪುದುಂ ॥೯೮॥

ಕಂಡು 'ಗೆಡೆ'ಗೊಂಡು ಗೋವರ ।
ತಂಡಂ ಬೊಬ್ಬಿಱಿಯೆ ಮಗುೞ್ದು ನೋಡಿ ಮಹೀಭೃ ॥
ನ್ಮಂಡನನುಂ ಮಂತ್ರಿಯುಮಾ ।
ಪಿಂಡನೆ ಕಪಗಾಣದಂತು ಕೌತುಕಮುತ್ತರ್ ॥　　　　॥೯೯॥

ವ॥ ಅಂತಾವಿರಾಟನ ತುಱುವಿಂಗಂ ನಂದಗೋಪನ ಗೋವ್ರಂದಕ್ಕಂ ಪಾ ಲೊಳಂ ಕೀಲದೊಳವುಳವಿದೆ ಸಳಂ ಬಳವಿಯೊಳಂ ಅಗ್ಗಳಮೆಸಿಸಿ ಕಾಟ್ಟು ಱುಗಳಂ ಸಮಱಿಪಡವಿಯಡಿಮೆತ್ತಿದಂತೆಯುಂ ಪಿಂಡುಗಳಂ ಪಾಯ್ವಂತೆ ಯುಂ ಸಯ್ಗೋಡುಗಳಂ ಲೋಡಿಸಿಸರದ ಕಾಡಂ ಕಾಲಿತ್ತಿದಂತೆಯುಂ ಕವಿ ದ ಕಿವಿಗಳಂ ಬಾವಲ ಪಿಂಡು ಪಕ್ಕಮಂ ಬಡಿಪಂತೆಯುಂ ಬೀಸುವ ಬಾಲಂ ಗಳಂ ಕಚ್ಚೆಯ ಕೆಚ್ಚಲುಣ್ಗೆ ಪಕ್ಕಿಯೆಱಗುವಂತೆಯುಂ ಬಣ್ಣವಣ್ಣಿಗೆಯ ಬಣ್ಣದಿಂ ಮುಗಿಲ ವರ್ಣವಾಗಿ ಬರ್ಪ ಗೋಕುಲಮಂ ಮನಂಗೊಂಡು ಮಾನವಮದನನುಂ ಮಕರಂದನುಮಾತುಱುಪಟ್ಟಿಯ ತುಱುಸೆಲೆಯೊಳ್ ನಿಂದು ನೋಡುತ್ತುಮಿರೆ ॥　　　　॥೧೦೦॥

ತ್ವರಿತಂ ಗೋಪಂ ಸಕೋಪಂ ಪೆಱಗೆ ಪರಿಯೆ ಹೂಂಕಾರದಿಂದಳ್ಳೆ ಬೀಗು । ತ್ತಿರೆ ಬಾಯಿಂ ಬಟ್ಟೆ[1]ಯೊ[2] ಸಾಲಿಡೆ ಪಸುನೊರೆಯಿಂ ನಾಂದ ಪುಲ್ ಮಿಳ್ಳಿಗೊಂಡ ॥ ಬ್ಬರಿಸುತ್ತುಂ ತನ್ನ ಕಣ್ಗಳ್ಕರೆಯೆ ನಿಕಟದೊಳ್ ಕೇಳ್ದು ಗಾಳ್ಮೇಳೆನುತ್ತುಂ । ಪರಿತಂದತ್ತೂರ್ಧ್ವದಿಂದಂಬಿರಿವಿಡೆ ಮೊಲೆವಾಲಂದು ಧೇನುಪ್ರತಾನಂ ॥　　　　॥೧೦೧॥

ಅಡೆಯಂ ಕೋ[3]ಡೆ[3]ತ್ತುತುಂ ಮಾರ್ದನಿಗೆ ಮಸಗುತುಂ ದರ್ಪದಿಂ ಛಾ ಯೆಯೊಳ್ಕೋ । ಡಿಡುತುಂ ಮುಂ ಕಾದಿ ಪುಣ್ದೊಂತ್ತಿಣಿಗೆಱಗೆ ನೊಱಿಂ ಶೀರ್ಣ ಶೃಂಗಾಗ್ರದಿಂ ಮಾ ॥ ದೊರ್ಡೆಯುತ್ತುಂ ಪಾಯ್ದು ಪಿಂಡಂ ಕಲಕಿ ಕಲೆ ಯುತುಂ ಬೆರ್ಚೆ ಬಲ್ಲೂಳಿಗಳ್ ಬೆಂ । ಗುಡೆ ಗಂಡಂ ಸೂಸುತುಂ ಬಂದು ದು ಮದವಿದಳತ್ತಿಂಗಳಾಕ್ಷಂ ಮಹೋಕ್ಷಂ ॥　　　　॥೧೦೨॥

---

ಪಾ— 1 ಗಡೆ. ಗ॥ 2 ಯೊಳ್. ಕ॥ 3 ಡೆ. ಗ॥

ಎಡಪಿ ಪರಲ್ಗಳಂ ದೆಸೆಗೆ ಬೆರ್ಚುತೆ ಗೋವನ ಗಾಳಿಗೆಯ್ದೆ ಪಿಂ ।
ಡಡಸುತೆ ಕಂದಮಂ ನೆಗಪಿ ನೋಡುತೆ ಪಕ್ಕಮನಗ್ರವಾಲದಿಂ ॥
ತೊಡೆಯುತೆ ಕರ್ಣಮಂ ತೆಱೆದು ತಿತ್ತಿರಿಗಾಳೆಯನಾಲಿಸುತ್ತೆ ಪಿಂ ।
ಡೊಡೆಯದೆ ಕೂಡಿ ಬರ್ಪ ಪಲವಾಕಳನೀಕ್ಷಿಸಿದಂ ನರಾಧಿಪಂ ॥೧೦೩॥

ಬರಲಾಱದೆ ಪೆರ್ಗೆಚ್ಚಲ ।
ಭರದಿಂದಂ ಪೆಱಗು ಕುಸಿಯೆ ಪೊಱೆಯುಂ ಕಳೆವಂ ॥
ತಿರೆ ತೊಱೆದ ತೋರಮೊಲೆಗಳ್ ।
ನಿರಿವಿಡುತುಂ ಬಂಗುವಂದು ಪಯಗಳ್ ಪಲವುಂ ॥ ॥೧೦೪॥

ಕಱು ಪೆಱಗುೞಿದಿರೆ ಹೊಂಗುಡು ।
ತಱುಚುತ್ತುಂ ಮಗುೞ್ದು* ಮೂಸುತುಂ ಪೇಲಸಂ ಮಾ ॥
ಸೊಱೆಯುತಿರೆ ಪಿಂತೆ ಕೆಚ್ಚಲ ।
ನಿಱುಂಕಿ ನಡೆತಂದುವೀಂದ ಪಯಗಳ್ ಪಲವುಂ ॥ ॥೧೦೫॥

ಪರವತ್ಸಂಗಳ ಬೞಿಯಂ ।
ಪರಿಗೊಳುತುಂ ತೊಱೆದ ಗೊಂತಮಂ ಬಿಡುತುಂ ಹೊಂ ॥
ಕರಿಸುತ್ತುಂ ಪೋಪಗ್ಗದ ।
ಪುರುಳ್ಗಳಂ ಮಿಗೆ ಮರಲ್ದು ನೋಡಿದನರಸಂ ॥ ॥೧೦೬॥

ಕಡುಗೊಬ್ಬಿದ ಕಡಸುಗಳಿಂ ।
ಕಡೆಯೊಳ್ ಬರುತಿರ್ಪ ಧೇನು ಬಡವಾಗಿರ್ದುಂ ॥
ಬಿಡೆ ಕರಮೆಸೆದುದು ಜಾಗಿಯು ।
ಬಡತನಮುಂ ಖಳನ ಸಿರಿಯಿನಗ್ಗಳಮಲ್ತೇ ॥ ॥೧೦೭॥

ಪೊಸನಸೆಯ ಸೊವಡನಾಸ್ರ ।
ಣಿಸಿ ಮಣಿಕದ ಮಿಡುಕುಗಚ್ಚೆಯೊಳ್ ಮೊಗವೆತ್ತು ॥
ತ್ತೆಸೆದುದು ವೃಷಮಮರರನೇ ।
ಡಿಸುನವೊಲೇನುಂಟೆ ನಿಮಗಮೀಸುಖಮೆನುತುಂ ॥ ॥೧೦೮॥

ಪಿರಿಮುಂ ಬಾಯ್ಪೆಣ್ಣೆ ಗಿಸ್ಗೊಳ್ ತಳರಡಿ ವನದೊಳ್ ಪುದ್ದು ಗೋವೃಂದದೊಳ್ ಬಂ । ಧುರಪಾಂಸುಕ್ರೀಡೆ ವತ್ಸಂಗಳೊಳನವರತಸ್ತನ್ಯಪಾನಂ ಸುಧೇನೂ ॥ ತ್ಕರದೊಳ್ ತಾನಾಗೆ ಗೋವ್ಯೂಹದ ಬೞಿವೞಿಯುಂ ಮೆಚ್ಚಿ ಬರ್ಪಾನಂದದಿಂದಂ । ಬರುತಿರ್ದರ್ ಮೊತ್ತದಿಂ ವಲ್ಲವರಳಿಕ[1]ಲಲತ್ಪಲ್ಲರ್ ಲೀಲೆಯಿಂದಂ ॥　　॥೧೦೯॥

ವ॥ ಅಂತು ಗೊಂದಣಿಸಿ ಬಂದು ಪಟ್ಟಿಗೆಳಂ ಪುಗುವ ಪ್ರಸ್ಯಾಂಗಂಗಳಪ್ಪ ಗೋವೃಂದಂಗಳನಾನಂದದಿಂ ನಿಂದು ನೋಡುತ್ತಮಿರ್ದು　　॥೧೧೦॥

ಕಟ್ಟಲೆ ಕವಿಯದ ಮುನ್ನಂ ।
ಮಾರ್ತಂಡನುಮಸ್ತಗಿರಿಗೆ ಸಾರದ ಮುನ್ನಂ ॥
ಸಾರ್ತಂದರ್ ಗೋಧೂಳಿಯು ।
ಪೊೞ್ತುೞೊಳಾಪಟ್ಟಿಗಾಗಿ ನೃಪಸಚಿವರ್ಕಳ್ ॥　　॥೧೧೧॥

ಯುದ್ಧರಸಲಂಪಟಪ್ರಪ ।
ಟೋದ್ಧತಿವಶವೃಷವಿಷಾಣವಿಷಮಿತಕಷಣೋ ॥
ದ್ಯದ್ಧತನಹವಗ್ಧಂ ಕಲು ।
ಷೋದ್ಧಾಮಂ ತದ್ಬಹಿಃಪ್ರದೇಶದೊಳೆಸೆಗುಂ ॥　　॥೧೧೨॥

ವಿದ್ರುತಪಶುಪದಹತಿಪತಿ ।
ತಾದ್ರಿಪ್ರಭಗೋಮಯೋಚ್ಚಯಂ ಸಮದವೃಷೋ ॥
ಪದ್ರವದರಿದ್ರಬಾಲವ ।
ಟದ್ರುಮಮೆಸೆದಿರ್ದುದದಱ ಬಾಹಿರದೇಶಂ ॥　　॥೧೧೩॥

ನಿರ್ಮಿಸಿದ ಗೋಕುಲಕ್ಕೆ ೞ ।
ತುಮರ್ಮುಖನೀಕ್ಷಿಸಲೆ ಬಂದನೆಂಬೀಭ್ರಮೆಯುಂ ॥
ನೊರ್ಮಡಿಸಿದುದಾಘೋಷದ ।
ಹಿಮ್ಮಡಿಯೊಳ್ ನಟ್ಟ [2]ಗೊಲ್ಲ[2]ದೇವತೆ ಸತತಂ ॥　　॥೧೧೪॥

---

ಪಾ— 1 ಲಸ. ಕ॥ 2 ಗೋಲ. ಜ॥

ನಱುನೆಯ್ಯ್ಮಾಱುವ ಸಿರಿಯಂ |
ಮೆಱೆಯಲೆ ಪೊಂಗಳನೆ ಗೋಪಿಯರ್ ಕೆದಱಿದವೋಲ್ ‖
ತುಱುವೆಯ ನೆಗ್ಗಿಲ ಪೂಗಳ್ |
ತುಱುಪಟ್ಟೆಯ ಪೊಱಗೆ ತುಱುಗಿ ಕರಮೆಸೆದಿರ್ಕುಂ ‖ ‖೧೧೫‖

ಕೆಲಕೊಱಗಿರ್ದ ಬಲ್ವರವಿಯಂ ಬಲಗೈ ಜಡಿದೊಪ್ಪೆ ತೂಗೆ ನೀ |
ಳ್ದಲೆದೆಸೆಗೈಯೊಳಾವರೆಯ ಪಂವಳಿಗರ್ಳ್ವಡೆಗೇಡುಮಾಸೆ ಸೋಂ ‖
ಕಿಲ ತೊಱೆ ತೀವಿ ಕಟ್ಟೆ ಕೊರಲೊಳ್ ಮನೆದೈವದ ಪೊನ್ನೊಳೊಪ್ಪಿದರ್ |
ಕೆಲಬಲದೂರ್ಗೆ ಪೋಗಿಯಳಿಮಾಱಿ ಮಗುಟ್ಟುರುತಿರ್ಪ ಗೋಪಿಯರ್ ‖

ಬಲೆದು ತಳಂಗಳಿಂ ಘಟಿಲೆನಲ್ಕುಡುಪಿಂ ಪೊಡೆದೆತ್ತಿ ಮೇಲುದಂ |
ಮೊಲೆಮುಗುಳ್ಗಳ್ತೆಱಂಬೊಳೆಯೆ ಬಾಯ್ದೆಱೆಯೊಳ್ ರಸನಾಗ್ರಪಲ್ಲವಂ ‖
ಮಲೆದು ಮರಲ್ದು ಸುತ್ತಿ ಸುಱುಕಲ್ದನಿ ಪೆರ್ಚಿರೆ ಬೆಳ್ಗದಾಗಿ ಸೂ |
ಱಿಲಿಗೆಲೆಯುತ್ತಮಿರ್ಪ ತರುಣೀಜನಮಂ ನೃಪನೊಲ್ದು ನೋಡಿದಂ ‖

ವ‖ ಅಂತು ನೋಡಿ

ಆಕಳ್ಗಳಿಲ್ಲದೆಯುಮೆಸೆ |
ವಾಕಳ್ಗಳ ಸೊರ್ಕು ಸಿಲ್ಕಿ ನಿಂದುದನಿಂದಾ ‖
ನೇಕಗಲ್ವೆನೆನುತೆ ಮತ್ತಾ |
ನೇಕಗವಾಶ್ರಯಮನುರ್ವಿಗಾಶ್ರಯನಾಗಳ್ ‖ ‖೧೧೮‖

ವ‖ ಅಂತು ಪೊಕ್ಕಂ; ಅದು ರಾಜಮಂದಿರದಂತೆ ಮಹಿಷೀಪದಾಧಿಷ್ಠಿತಮುಂ, ಸುಭಟಭುಜದಂತೆ ವಿಭಾಸಿಧೇನುಸ್ಥಾನಮುಂ, ಸ್ಮರನಸಿರಿಯಂತೆ ಸುರಭಿಶೋಭಿತಮುಂ, ದರಿದ್ರಕಾಮುಕನಿಕರದಂತೆ ಸುಪ್ರಕಟಿತಾರ್ಣಕೋಪಚಯಮುಂ, ಕಥಕಫಲದಂತೆ ವಿವಿಕ್ತಮಹಾವ್ರಜಮುಂ, ಚಂದ್ರೋದಯದಂತೆ ಹಿಮಧವಲಮಹೋದಧಿಸಮೃದ್ಧಿಯುಂ, ನಾಥವಂಶದಂತೆ ಸುಧಾಮೋದಿತಕ್ರಮಹಿತಮುಂ, ಚೈತ್ರೋತ್ತರಮಾಸದಂತೆ ವೈಶಾಖಶಬ್ದಸಮಭಿಧೇಯಮುಂ, ದಶರಥಪ್ರಸೂತಿಯಂತೆ ಸದಾನವನೀತಕಾಂತಮುಂ, ವಿಟವೃತ್ತದಂತೆ ಸರಾಗೋಪನತನಿತಂಬಿನೀಜನಮುಂ, ಸುಪ್ರಯುಕ್ತಪ್ರಮಾಣದಂತೆ

ವಿಗಳಿತಾನವಸ್ಥಿತಿಯುಂ, ಪನವರೂಥದ್ವಿತಯದಂತೆ ಕರೀಷಾಕೀರ್ಣಮುಂ, ಕಾಲಕೃಷ್ಣನಾಭಿಕುಲತ್ರಿತಯದಂತೆ ಪತ್ರರಾಜವೃಷಭವಿಭೂಷಿತಮುಂ, ಮಾರ್ತಾಂಡಮಹಿಪಮುನಿತನುಮಹೇಂದ್ರಚತುಷ್ಟಯದಂತೆ ಸುರಭಿರಾಜ್ಯಪರಿಮಳಪವಿತ್ರಮುಮೆನಿಸಿದುದಂತುಮಲ್ಲದೆಯುಂ, ॥೧೧೯॥

ಮದಮಾತಂಗದವೋಲ್ ವಶಾವಿಳಸಿತಂ ಸತ್ಕ್ಷತ್ರಿಯಪ್ರಾಜ್ಯರಾ ।
ಜ್ಯದವೋಲ್ ಸಂಗತಸಂಧಿನೀತಿಸಿರತಂ ನೀಹಾರರುಙ್ನಕ್ಷ ॥
ತ್ರದವೋಲ್ ರಾಜಿತರೋಹಿಣೀಪರಿಗತಂ ಶ್ರೀಮದ್ದಯಾಮೂಲಧ ।
ರ್ಮದವೋಲ್ ವಿಶ್ರುತಸುವ್ರತಾಚರಿತಮೇಂ ಚೆಲ್ವಾಯ್ತೊ ಗವ್ಯಾಶ್ರಯಂ ॥

ವ॥ ಆಪ್ರಸ್ತಾವದೊಳ್

ಕಱುವಂ ಬಿಡು ಕಱೆ ತೊಳ್ ನೀಂ ।
ರೆಱೆ ಕಂದಲನೊಱಸಿ ತೊಳ್ ತಗುಳ್ದುದೆಮಾವಂ ॥
ತುಱಿಸು ತಳೆಯಿಕ್ಕು ತಡೆಯದೆ ।
ಮುಱುವಂ ಸುರಿಯೆಂಬ ಸರಮೆ ತುಱುಗಾರ್ತಿಯರೊಳ್ ॥ ॥೧೨೦॥

ವ॥ ಆಗಳ್

ಅಡರ್ದು* ಮೊಲೆಗೊಡಗಳಡಸಿರೆ ।
ಮಡಗಳ್ ಪೊಱಮಾಱ ಪೊಱೆಗೆ ಕೆಪ್ಪೆದಿರೆ ಕಱೆಯಲ್ ॥
ಪಡೆಯದೆ ಗಡಿಗೆಯನೋರ್ವಳ್ ।
ಬೆಡಂಗಿ ತುಱುಗಾರ್ತಿ ಪತಿಯ ಕೈಯೊಳ್ ಕೊಟ್ಟಳ್ ॥ ॥೧೨೧॥

ಪಿಡಿಗೆ ಕಡುದೊಱೆದ ಮೊಲೆಯಳ್ ।
ಪಡದೊಡೆ ಮೊನೆವಿಡಿದು ಪಾಲನೇಱಿಸಿ ನೊರೆಯಂ ॥
ತೊಡೆದು ತುಱುಗಾರ್ತಿ ಕಱೆದಳ್ ।
ಗಡಿಗೆಯ ಪಾಲುರ್ವಿ ಘಮಘುಮೆನುತಿರೆ ಪಯಮಂ ॥ ॥೧೨೨॥

ಇರಿದೊಂದೆರಡಿರಿಯಿಂ ತೀಂ ।
ವಿರೆ ಕಂದಲ್ ತನ್ನ ಬಿಳಿಯ ಕಣ್ಗಳ ಬೆಳಗಿಂ ॥

ನೋರೆವಾಲಿಂ ತ್ರಿವಳಿಗೆ ।
ತ್ತಿರವೆಬ್ಬಿಪಳಾತ್ಮಪತಿಯುನೇಂ ನಗಿಸಿವಳೋ ॥ ॥೧೨೪॥

ಮಡದಿ ನಿತಂಬಮಂ ಮಡದಿನಾಂತು ಕೆಲಕ್ಕೊಱಗಿರ್ದ ಕಂಧರಂ।
ತೊಡೆಯೊಳಱುಂಕೆ ಬಳ್ಕೆ ನಡು ಬೆನ್ನುಡಿ ಪೆರ್ದೊಡೆ ಮುಗ್ಧಧಾರೆಯೊ॥
ಳ್ಗಡಣದಿನಾಡೆ ಕಣ್ಬೆಳಗು ಬಲ್ಗಡಗಂ ಬಿಗಿದೊತ್ತೆ ಕೈಗಳಂ।
ಸಿಡಿಪ ಕುಚಾಗ್ರದೊಳ್ ತುಱುಗೆ ಪಾಲ್ವನಿಗಳ್ ಕರೆವಳ್ ಘಟೋಧ್ನಿಯಂ

ಓಹೋ ಹೊಗೞಿದಿರೆನಿಸಿದು ।
ವಾಹದದೊಳ್ ಜಲಧಿಘೋಷಮಂ ಧೇನುಪ್ರ ॥
ಷ್ಠೋಹಿಂದೊಣಮುಖೋದ್ಧೃತ ।
ದೋಹನಘನಧೀರದುಗ್ಧಧಾರಾಧ್ವನಿಗಳ್ ॥ ॥೧೨೬॥

ವ ॥ ಅಂತು ಶೋಭೆಗೆಱೆವಟ್ಟಾದ ತುಱುವಟ್ಟಿಯಂ ವಿಸ್ಮಯಂಬಟ್ಟು ನೋಡುತ್ತುಂ ನಡುವಿರುಳಾಗೆ ಮನೋನಯನನೀಯಮಾನಮನೋಹರ ರೂಪಕನಪ್ಪ ಮಾನವಮದನನಾತ್ಮಮಿತ್ರಂ ಬೆರಸು ಸಮುಚಿತಪ್ರದೇಶ ದೊಳ್ ವಿಶ್ರಮಿಸಿ ಬೆಳಗಪ್ಪ ಜಾವದೊಳ್ ॥೧೨೭॥

ಇನಿಸುಂ ಪೊಕ್ಕೊರು ಮಿಕ್ಕೊಸರಿಸಿದ ಚರಣಂ ಶೋಭೆಯಂ ಬೀಱೆ ಕುಂಭ । ಕ್ಕೆ ನಿತಂಬಂ ಸುತ್ತಿ ನೇಣಂ ತೆಗೆವ ಪುಗುವ ಕೈಗಳ್ ಬೆಡಂಗಾಗೆ ತುಂಗ॥ಸ್ತನಯುಗ್ಮಂ ತೂಗೆ ಸೂತ್ಕಾರದಿನುಸಿರ್ವಿಡುತುಂ ಲೋಳೆವಾಯು ಚರ್ಯೊವರ್ಳ್ । ತೊನೆಯುತ್ತುಂ ಪಾಡಿ ಪಾಲಂ ಪೊಸೆದಳೆಸದಳಂ ಪೊಣ್ಮೆ ಘರ್ಮಾಂಬುಜಾಲಂ ॥ ॥೧೨೮॥

ಕಡೆಗೋಲ ಪೊಯ್ಲಿನಿಂದಂ ।
ಸಿಡಿದು ಶರೀರದೊಳ್ ತುಱುಗೆ ತಕ್ರಕಣಂಗಳ್ ॥
ಕಡೆದೇಳ್ವಿಳೆಸೆದಳಾಪಾ ।
ಲ್ಗಡಲಿಂ ಪೊಱಮಟ್ಟ ಪೊಚ್ಚಪೊಸಸಿರಿಯಿರವಿಂ ॥ ॥೧೨೯॥

ಕಡೆವಾಕೆಯ ಮುತ್ತಿನ ಕ ।
ನ್ನಡಿಯಂತಿರೆ ತೊಳಗೆ ಘರ್ಮಜಲಬಿಂದುಗಳಂ ॥

ಬಿಡುವ ಮೊಗಮೆಸೆವುದಾಪಾ ।
ಲ್ಗಡಲೊಳ್ ತಾಂ ಪುಟ್ಟಿದಮೃತಕರಬಿಂಬದವೊಲ್ ॥ ॥೧೩೦॥

ಅತಿಸನತಕಾ್ರಟಪರಾ ।
ಪತಿಗಂ ಮೊಸರೊಸೆಯದೆಂದು ಬೇಸತ್ತವೊಲು ॥
ನ್ನತಕುಚೆ ಬಟಲ್ದು ಸುಯ್ಯ್ಯು ।
ತ್ತಿರಭಸದಿನೊರ್ವಳೊಲೆಮು ಮೊಸರಂ ಪೊಸೆವಳ್ ॥ ॥೧೩೧॥

ಅನಿಮಿಷತೆ ಪೊದ್ದ ದಾನವ ।
ವಿನಿಯೋಗದೆ ಕಡೆದು ಪಲವು ಸಿರಿವಡೆದಾಸಿ್ತ್ರೀ ॥
ಜನವುಲೆದುದು ಸಿರಿಗೆಂದಂ ।
ದನಿತಾಯಾಸಕ್ಕೆ ಸಂದ ಸುರದಾನವರಂ ॥ ॥೧೩೨॥

ವ॥ ಆಪ್ರಸ್ತಾವದೊಳ್

ಕಾಯ್ಸ್ತಿಂ ಕೆಟ್ಟೆನೋವೊ ಬೊಬೊಬೊಬೊಬೊಬೊಬೋ ಕೂಗು ಕೂಕೂಗು ಕೂಸಾಯ್ । ಸಾಯ್ಸೋಯಿತ್ತಿತ್ತ ಪರ್ಿತ್ತೊರಸಿ ಬೆರಸು ಬಾಯ್ಮಾಡಿದೇನೆಂದು ನಿಂದಾ ॥ ರಯ್ಯುಸ್ತೊತ್ತಿತ್ತು ಬಿಲ್ಲಂ ನಸೆದಿಡುವಡಿ ಯಂಕೊಳ್ಕೊಳೆಯ್ದಯ್ದು ಬೈಯ್ಪೊ ॥ ಯ್ಕೊಯ್ಸೀಳ್ಕೊಳ್ಕುತ್ತು ಕೊಲ್ಕೊಲ್ಕಿಡೆ ಕಡೆಕಡೆಯೆಂಬಬ್ಬರಂ ಪರ್ಬಿತತ್ತಂ ॥ ॥೧೩೩॥

ವ॥ ಅದಂ ಕೇಳ್ದು ಕಾಳೆಯುಂ ಸೂಳೈಸುವ ತಿತ್ತಿರಿಯನೊತ್ತುವ ಕೊಳಲನೂದುವ ಕೊಂಬುಂ ಪಿಡಿವ ಗೋವರ ಕಳಕಳಕ್ಕೆ ಕೆಳದರ್ ಬಿಲ್ಲ ನೇಱಿಸಿ ಪರಿವ ಬಿಲ್ಲಾಳ್ಗಳುಮಂ, ಸುರಗಿಗಿತ್ತು ಪರಿವಸೆರಗರಿಗಳುಮಂ, ಬಡಿಕೋಲಂ ಪಿಡಿದು ಪರಿವ ಬದಗರುಮಂ, ಬಿಟ್ಟಜನಾಂತು ಪರಿವೊಟ್ಟೆಜೆಕಾಱರುಮಂ, ಇಟ್ಟಿಯನೆತ್ತಿ ಪರಿವ ಜಟ್ಟಿಗರುಮಂ, ಕೀಲ್ಗೊಂಡಬಾಳಂ ಬೀಸುತ್ತುಂ ಪರಿವ ಗೋಸುಗಲಿಗಳುಮಂ, ಕಣ್ಗೋಱೆ ಮೊಗಮಂ ಸುತ್ತಿ ಕುಂಬಿಕ್ಕುತುಂ ಪರಿವ ಕಡುಗಂದಿಗಲಿಗಳುಮಂ, ಬಿಟ್ಟ ಕಣ್ಣುಂ ಬಿಗಿದ ಮೊಗಮುಂ ಕರ್ಚಿದವುಂಡುಂ ಕಡಿತಲೆಯುಂ ಬೆರಸು ಮೊರೆಯುತ್ತುಂ ಪರಿವ ಪೆಂಕುಳಿಗಲಿಗಳುಮಂ, ನೆಣಗೊರ್ಬಿನಿಂದುರ್ಬಿನಿಂ ಪರಿವಳ್ಳಿ

ವ್ರೈಯ್ಯೆ ಪೆಱಗಾಲಪ್ಪ ಪೆರ್ಬಾಸಗಿಲ್ಗಲಿಗಳುಮಂ, ನಟ್ಟಲಗಂಪಿಡಿದುಬಿಟ್ಟ
ತಲೆವೆರಸು ತೂಳಂ ಬಂದಂತೆ ಬೊಬ್ಬಿಱಿದು ಪರಿವಬ್ಬರಗಲಿಗಳುಮಂ, ನೆ
ರವಿಯನುರುಳ್ಚಿವಾಯ್ದುಗುರ್ವಿಸಿ ಪರಿವ ಕರ್ಬಸುಗಲಿಗಳುಮಂ, ಡಂಗೆಯುಂ
ಗೊಂಡು ಕೆಂಗಲ್ಕ್ರಸಗಿ ಪರಿವ ಮರುಳ್ಗಲಿಗಳುಮನೆತ್ತೆತ್ತವೆಂದೆತ್ತಲುಂ ತಳ
ರದೆ ತಾಳುಗೆ ಪತ್ತಿ ಬತ್ತಿ ಬಾಯ್ಮ್ರಾಡಿ ನಾಲಗೆಗಿತ್ತು ಕೊಳ್ಳ ನಾಲಗೆಗಲಿಗಳು
ಮಂ, ತ್ರಾಱುಂ ತಟ್ಟಂ ಪರಿದು ತಾಗಿ ಮೂಗೊಪೆಯೆ ಬಾಗಿವಾಗಿ ಪರಿವ
ಬೆಗಡುಗಲಿಗಳುಮಂ, ತೂಂಕಡಿಂ ತಡವಡಿಸುತ್ತೆ ದುರ್ಗ ತಡವರಿಸಿ ಕಪೆಗೋ
ಲಂ ನೆಗಪಿ ಬತ್ತಲೆ ಪರಿವ ತಳೆವಿಡಿಗಲಿಗಳುಮಂ, ಸಂಭ್ರಮದಿಂ ಸಜ್ಜನು
ಚೆರ್ ಸುರಿಗೆಯುಂ ಬಿಸುಟ್ಟು ಬಱಿಯೊಱೆಯುಂ ಕೀಱುತ್ತುಂ ಪರಿವ ಕಿಱು
ಕುಳರುಮಂ, ಸಡಿಲ್ದ ಪಾಲಿಗೆವಂದಱಿಂ ಕಚೆರ್ ಕ್ಕೈಯಡ್ಡಾಯುಧಮನೀ
ಡಾಡಿ ದಡಿಯುಂ ಕೊಂಡು ಪರಿವ ದಡಿಗರುಮಂ, ಪಚ್ಚಡಮಂ ದುಂಡನಾಗಿ
ದಂಡೆಯುಂ ಸುತ್ತಿ ಸೂನಗೆಯನೆತ್ತಿ ಪರಿವ ತೆತ್ತಿಗವೀರರುಮಂ, ಬಂಕಿಯುಂ
ತೂಗಿ ತೇಂಕುತ್ತುಂ ಪರಿವ ವೈರಿಗರುಮಂ, ಮುದ್ಗರಮಂ ತಿರಿಪಿ ಪರಿವ
ಮುದ್ಗರಿಗಲಿಗಳುಮಂ, ಬಂದೆಸೆಯೊಳಬ್ಬರಮಾದೊಡೊಂದೆಸೆಗೆ ಪರಿವ
ಬಂದವಿಂದಿಗರುಮಂ, ಅಬ್ಬರಕ್ಕೆ ಬಸಿಱುಬ್ಬರಿಸೆ ಬಿಱಿಯುಂ ಕೊಂಡು ಬಿ
ಱುವರಿವ ಬಿಱುಗರುಮಂ, ವಟ್ಟೆಱಿದು ನಾಂದು ಪೊಟ್ಟಯಿಸಿದಡ್ಡಳಮುಂ
ದಂಡೆಯೊಳ್ಕೀದು ಕೈದುವಂ ಕಾಣದೊನಕೆಯನೆತ್ತಿ ಪರಿವರಿಗಳುಮಂ,
ಪೊಱಮಡುವ ಸಡಗರದಿಂ ಸೂತರ್ಗೆ ಸುಲಿವ ನೊಸಲೊಳ್ ನೆಲಸೆಕಮನಿ
ಕ್ಕಿ ಪೆಂಡಿರ್ ಪಿಡಿಯೆ ಪಿಡಿಯೆ ಪರಿವ್ರೊಱಂಟರುಮಂ, ಕೈಯಕ್ಕೈದುವನೆಱೆದು
ಕಳೆದು ಕೊಂಡ ಪೆಂಡತಿಗೆ ಕನಲ್ದು ಕೊರಡನೆತ್ತಿ ಪರಿವ ಕೊರಡಿಗರುಮಂ,
ಪಾಱಿಕ್ಕಿ ಪರಿವಲ್ಲಿ ಬಾಲಗಚ್ಚೆ ಕಾಲಂ ತೊಡರೆ ಕೆಡೆದೊಡೆದ ಮೊಣಕಾಲೊ
ಳುಪ್ಪಂ ಪತ್ತಿಸಿ ಪರಿವ ಪಾಱಿಗಳುಮಂ, ನಿದ್ದೆಗಣ್ಣೊಳೆರ್ದು ಗೂಗೆದಲೆ
ಯಗುದ್ದಂ ನೆಗಪಿ ಪರಿವ ಕದ್ದಲಿಗಳುಮಂ, ಗೊಂಟುಮನೆಡಪಿ ಪಾಸಿ ಪರಪಿ
ಬೀಱ್ದು ಬಸಿಱ ಪುಡಿಯುಂ ತೊಡೆದು ಪರಿವ ತನಕಿಗರುಮಂ, ಎಡಪಿಯೊಡೆ
ದುಂಗುಟದೊಳಂಚೆಯುಂ ಕಟ್ಟಿಕೊಂಟುತ್ತುಂ ಪರಿವ ಕಿಱುವಂಟರುಮಂ, ತಲೆ
ಕೆಳಗಾಗಿ ಕಟ್ಟಿದಲಗೊಱೆಯನುರ್ಚಿ ಬೀಱೆಪಿಂಮಡಿಯುಂ ಪಱಿಯೆ ಪೆಱಗಂ
ನೋಡುತ್ತುಂ ಪರಿವ ಪೆರ್ಬಂಟುಮಂ, ಬಱುಗಯ್ಯಿಂ ಪರಿವ ಪತಿಗೆ ಕೈದು

ವಂ ಕೊಂಡುಯ್ದು ಕಾಡುವಪ್ಪಿಯರುಮಂ, ಪಾದರಿಗಂಗಿಡಿವರ್ಗರಿಪು ಫಳಿ
ಲನೆ ಪಾಯ್ದು ಪೆರ್ಮೊರೆಯಿಂ ಪ್ರಾಯ್ದು ಬೆರಸಿ ಬಿಟ್ಟು ಪ್ರೇರಳುತ್ತಿರ್ಪ ಪಾ
ಣ್ಬೆಯರುಮಂ, ಪತಿಗಪಾಯಮುಮುಪಪತಿಗೆ ಸುಖಮೊ ದಮುಮುಮಕ್ಕೆಂದ
ಮನದೊಳ್ ಮನೆದೈವಕ್ಕೆ ಹರಸಿಕೊಳ್ವ ಪುಂಶ್ಚಲಿಯರುಮಂ, ಪಸುಗೂಸ
ನಮುಚಿರ್ಕೊಂಡೊಳಗಣ್ಗಿಂ ಪ್ರೊಜಗಣ್ಗಿಂ ಬರ್ಪ ಬಾಳಕಿಯರುಮಂ, ಗು
ಬ್ಬಿಯಂತೆ ಬಾಯಂ ಬಿಡುವ ಗರ್ಭಿಣಿಯರುಮಂ, ಬಜ್ಜಗಣ್ಣ 'ನೀರನಿ'
ಕ್ಕುವ ಬಂಜೆಯರುಮಂ, ಬಸಿಱಂ ಪ್ರಿಸಿಮು ಕೊಳ್ವ ಬಸ್ದಿಯರುಮಂ,
ಮುಸುಡಂ ಮೊಗದಿಕೊಳ್ವ ಮುದುಗಣ್ಗಳುಮಂ, ಸೊಸೆಗೆ ಪಲ್ಲಂ ತಿನುತ್ತೆ
ನೆತ್ತಿಯಂ ಪ್ರಯ್ದು ಕೊಳ್ವತ್ತೆಯರುಮಂ, ಮುನಿರ್ಬುಗೊಳ್ವ ಪೆಮ್ಮ
ಕ್ಕಳುಮಂ, ಗೋಟುಂಡೆಗೊಳ್ವ ಗೋವರ್ಕಳುಮಂ, ಚೀಱಿಕೊಳ್ವ
ಕೊಡಗೂಸುಗಳುಮಂ, ಬೆಗಡುಗೊಳ್ವ ಬಾಳಕರುಮಂ, ಭಯಂಗೊಳ್ವ
ಬೆಳ್ಳರುಮಂ, ಉಬ್ಬರಿಸುವ ಕುರುಡರುಮಂ, ಪೆಳವಳಿಸುವ ಕಿವುಡರು
ಮಂ ಕಂಡು ಪೊಲಗೆಟ್ಟಿಯಾನೆ ಪೊಕ್ಕಂತೆಯುಂ, ಡೊಂಬರ ಬೀಡಿನೊಳ್
ಬ್ಬರವಾದಂತೆಯುಂ, ಬೆಳ್ಳಿಲಿಯ ಬಿಲದೊಳ್ ನೀರ್ ಪೊಕ್ಕಂತೆಯುಂ, ತು
ಱುಪಟ್ಟೆಯೆಲ್ಲಂ ಕಿಟ್ಟಿಲೆಯುಂ ಕಿಱಿಂದಲೆಯುಂ ಕಲ್ಲಿಯುಂ ಕವಿಯಲಾದ
ಪುದಿದೇನೆಂದು ಸಂಭ್ರಮಿಸಿ, ॥೧೩೯॥

ಪವಿಘೋಷಕರ್ಕಜ್ಜಗಂ ಸೆಜ್ಜರದಿನಸುರನಾಗೇಂದ್ರನೆಯ್ದಂತವೋಲ್।
ಕರ್ಣವಕಲ್ಲೋಲಾರವಕ್ಷುತ್ಸ್ಫಣಿತಫಣಿಪತಿಸ್ಥೂಳತಲ್ಪಾಗ್ರದಿಂ ಕೇ ॥
ಶವನೆಯ್ದಂತಭ್ರನಾದಕ್ಕಚಳಮಣಿಶಿಳಾಪಟ್ಟದಿಂ ಸಿಂಹವೆಯ್ದಂ ।
ತೆವೋಲೆಟ್ದಂ ಗೋಪಕೋಳಾಹಳಕಲರ್ವ*ಸೆಯಿಂ ಭಾರತೀಚಿತ್ತಚೋರಂ॥

[1]ತಾಳ[2]ವಱಾವಕೇಶವನುಗು[3]ರ್ವಿನೆಯಿಂ ತೆಗೆದೊತ್ತಿ ಪಾಲ[4]ಯಂ।
ಪಿಱಿವ ಸುತ್ತಿನೋಲೆಗಳ[5]ನೋವುತುವಾ[6]ಯತವಾಗೆ ತೋಟ್ಟು ವು॥

ಪಾ— 1 ಸಿರಿವ. ಜ॥ 2 ತಾಜು. ಚ॥ 3 ವೊರ್. ಚ॥
4 ಯಿಂ. ಜ॥ 5 ನಾವ್ರತಿಯಾ ಚ॥

ಯ್ಯೋೞಿರೆ ಕಟ್ಟ ಕ್ಕೈಪ್ರೆ ಡೆಯನಾಗಡೆ ಜೀವಿಗೆ ಜೀವಮೀವವ್ರೋ ।
ಲೇಱುಸಿ ಬಿಲ್ಲನಾಜಿವಿಜಯಂ ಜಯವ್ರೆಯ್ದುಸುದಾತ್ತರಾಘವಂ ॥೧೩೬॥

ಇದು ವಿದಿತವಿವಿಧಪ್ರಬಂಧವನವಿಹಾರಪರಿಣತ ಪರಮಜಿನಚರಣಾರವ್ಯ

ಕ್ಕೈವಾಚಲೋಚ್ಚ್ಯಲಿತನಖಮಯೂಖಮಂದಾಕಿನೀಮಜ್ಜನಾಸಕ್ತ

ಸಂತತೋತ್ಸಿಕ ದಾನಾಮೋದಮುದಿತಬುಧಮಧುಕರಪ್ರಕರ

ಕವಿರಾಜಕುಂಜರ

ವಿರಚಿತಮಪ್ಪ

ಲೀ ಲಾ ವ ತಿ ಯೊ ಳ್

ಶರದ್ವರ್ಣನಂ

ಪಂಚಮಾಶ್ವಾಸಂ.

---

ಶ್ರೀನಾಥನಂತು [1]ಜೇ[1]ವೊಡೆ ।
ದಾನಿನದಂ ಪೊಡೆಯೆ ಕೆಲಕೆ ಕೆಡೆದಳುರ್ದ[2]ವೊ[2] ವೈ ॥
ಶ್ವಾನರನುರಿಯುದಯತಟೋಂ ।
ದ್ಯೈಸಮನೆನೆ ಮೂಡ ಸಂಜೆ ಮೂಡಿದುದಾಗಳ್ ॥ ॥೧॥

ಆಘನುವಧರಿತವಿಲಯಾಂ ।
ಘೋಧರರವಮು[3]ವಿ[3] ಮಾವಿಱಯಿರವಂ ವೇಳೋಂ ॥
ವೀಱಧರಮುಂ ಧೀಂಕಿಟ್ಟು ಪ ।
ಯೋಧಿಯೆ ಕವಿದಂತೆ ಕವಿಯೆ ಕಟ್ಟಿತೆ ಪಂಗುಟ್ಟಿಂ ॥ ॥೨॥

ಆದಿರೆ ನೆಲನುದಿರೆ ತಾರಗೆ ।
ಬೆದಱೆ ಸುರರ್ ಕೆದಱೆ ದನುಜರೊದಱೆ ಫಣೀಂದ್ರಂ ॥
ಮದಿಲಡರ್ವ ಘೇಂಕದಂತೆವೊ ।
ಲುದಯತಟಾಗ್ರದಿನುರುಳ್ದನಿನಸಂಬುಧಿಯೊಳ್ ॥ ॥೩॥

ತುಮುಲದ್ಮೈರಾವತಂ ಗಪರ್ವುನೆರ್ದಯೊಡೆಯಲ್ಪುಂಡರೀಕಂ ಪಣುಂ ಕಲ್ । ಕುಮುದಂ ಕುಂಬಿಕ್ಕಲಾಅಂಜನನಳವ್ರಗಿ[4]ದ[4]ಲ್ವಾಮನಂ ಪುಷ್ಪದಂತಂ ॥ ತಮಳೆಲ್ ತತ್ಸಾರ್ವಭೌಮಂ ಸುಗಿಯಲಗಿಯಲಾಸುಪ್ರತೀಕಂ ಸುರುಳ್ದಂ । ಸಮದಿಂದ್ರಂ ವಹ್ನಿ ಕಾಲಂ ದನುಜನುದಧಿಪಂ ವಾಯು ಯಕ್ಷಂ ತ್ರಿಯಕ್ಷಂ ॥ ॥೪॥

ಆಧ್ವಾನಿ ಪೊಣ್ಮಿ ಪೊಯ್ವ್ಯಲುದಿರ್ವಂತೆವೊಲಿದುರ್ದು ತಾರಕಾಳಿ ತಾ ।
ರಾಧ್ವದೊಳಸ್ತಶೈಲಶಿಖರಾಗ್ರದೊಳಿದುರ್ದು ಚಂದ್ರಮಂಡಲಂ ॥
ಸಾಧ್ವಸದಿಂದುರುಳ್ದುದಿನಚೆತ್ತಿದ ತನ್ನ ಪ್ರತಿಪ್ರತಾಪತುಂ ।
ಗಧ್ವಜದಂತೆ ಮೂಡಿದುದು ಮೂಡಣ ದಿಕ್ಕಿನೊಳರ್ಕಮಂಡಲಂ ॥೫॥

ವ॥ ಅಂತು ಯುದ್ಧಸನ್ನದ್ಧನಾಗಿ ಧನುರ್ಗುಣಕ್ವಣಿತಕರಣಪ್ರಣ[5]ಯ ಪಾಣಿ[5]ಯಪ್ಪ ಮಂತ್ರಿಪುತ್ರಂಬೆರಸು ರಾಕ್ಷಸರಣಕಳಕಳಕ್ಕೆ ಲಕ್ಷ್ಮಣಂ

ಪಾ— 1 ಜಯ. ಕ॥ ಚ॥ 2 ದೊ ಚ॥ 3 ವಿಱ. ಗ॥ ಜ॥ 4 ಯ. ಖ॥
5 ಯಿಪಾಸೆ. ಖ॥ ಗ॥ ಚ॥

ಬೆರಸು ನಡೆವ ರಾಘವನನಂತುದಾತ್ತರಾಘವಂ ಗಾವಳಿಯ ಬೞಿಯನೆ ನಡೆಯೆ
ನಡೆಯೆ, ||೬||

ಮಿದುಳಳಱಿಂದಮೊಕ್ಕ ಕರುಳಿಂದಮುಗುಬಿರ್ಪ ಬಿಕ್ಕಿನಿಂದಮೊ ।
ಟ್ಟೈದ ನೆಣದಿಂ ಪೊರಳ್ವ ಪೆಣದಿಂ ಬಿಡೆ ಬಿಕ್ಕುವ ಮಸ್ತಕೌಘದಿಂ ||
ಕೆವಱಿವ ಮಾಂಸದಿಂದೆ ಮಡುಗಟ್ಟಿದ ರಕ್ತದೆ ಕೆತ್ತುತಿರ್ಪ ಖಂ ।
ಡವೆ ಜನನುಂಡು ಕಾಱಿದವೊಲಿರ್ದುದು ಮಾರ್ಗಮದೆತ್ತ ನೋೞ್ಪೊಡಂ ||
ಮಿಡಿಯಿಂ ಬೆಂಬರಮೆಯ್ದೆ ಸೀೞ್ದ ಶಬಸಂಘಾತಂಗಳಂಗುಷ್ಠದಿಂ ।
ತೊಡೆಯಂ ತಾಪಿನಮೆಯ್ದೆ ಪೋೞ್ದ ಪೆಣಗಳ್ ಬೆರ್ಬಟ್ಟೆಯಂ ಮುಟ್ಟೆ ಮೆ||
ಯ್ವಿಡೆ ಭಾಳಾಗ್ರಮನೆಯ್ದೆ ಬಿಟ್ಟ ಕುಣಪವ್ರಾತಂಗಳಾಬಟ್ಟೆಯೊಳ್ ।
ಮಡದಿಂ ಪೆರ್ಬರಿಗೆಯ್ದಲಿರ್ದವೃತಕವ್ಯೂಹಂ ಕರಂ ಭೀಕರಂ ||೮||
ಕದಳಿಯ ಕಂಭಮಂ ಕಡಿದು ತಿಂದವೊಲಚ್ಚುತಮುರ್ಬಿದೂರುಗಳ್ ।
ಬಿದಿರನಡುತ್ತರ್ ಮೆೞ್ದು ಬಿಸುಟಂತೆ ಭಯಂಕರಮಾದ ಕೈಗಳ ||
ಳ್ಮದುಳಿಗೆಗೆತ್ತೆಯಂ ಮುಸಗಿ ಮೆಯ್ದವೊಲಾಸುರಮಾದ ಮುಂಡೆಗಳ್ ।
ಬೆದಱಿಸೆ ನೋೞ್ಪರಂ ಪೊರಳುತಿರ್ದುದು ಪಾಮರವೃಂದಮೆತ್ತಲುಂ ||೯||
ಎರಡೆರಡು ಪೋೞ್ಗಳಾಗಿರೆ ।
ಕರಗಸದಿಂ ಪೋೞ್ದ ತೆಱದೆ ಬಿದಿರ್ದರ್ ಭಟರೋ ||
ತ್ಕರಮಂ ಕಾಣುತ್ತಮೆ ಸೂ ।
ಕರಸಮರಮಿದೆಂದು ಬಗೆದನಾರಣಧೀರಂ || ||೧೦||
ಪಂದಿ ಪೊಯೆ ಪಱಿಯೆ ಕೈ ಕಾ ।
ಲೊಂದೆಡೆಯೊಳ್ ಕೆಡೆದ ಬೇಂಟೆಕಾಱರ್ ಭರದಿಂ ||
ಕುಂದದೆ ಮೃಗಮಂ ಕೊಂದಪೆ ।
ರೆಂದಮ ದಂಡಿಸಿದ ತೆಱದೆ ಪೊರಳುತ್ತಿರ್ದರ್ || ||೧೧||
ಪಾಯ್ದು ಪೊಯೆ ಪಂದಿ ಬಾಳಿಂ ।
ಪೋಯ್ದಂತಿರೆ ಕಡಿದು ಕೆಡೆಯೆ ಮಿಡಿ ತೊಡೆ ನಡುಗಳ್ ||

---

ಪಾ— 1 ಡ್ಡಿ ಕ|| ಚ|| 2 ಮಿಡಿ ಕ|| 3 ಳಂಗುಟ್ಟದಿಂ. ಕ|| ಚ||
4 ಪೀರ್ವಟ್ಟೆಯಿಂಮುಟ್ಟೆಮೆಯ್ಪಡಿ 5 ಪಱಿದುಕೈಕಾಲ್ಕೊ ಖ|| ಚ||

ಕಾಯ್ದು ಕೃತಾಂತಂ ಪಣಿವಂ ।
ಬೊಯ್ದಂತಿರೆ ಬೇಂಟೆಕಾಱರರೆ ಬಿದಿರ್ವರ್ ॥　　　　　　　　॥೧೨॥
ಮುಱಿಯೆ ನಡು ಕೊಱೆಯೆ ಕಾಲರೆ ।
ಮುಱಿಯೆ ಮೊಗಂ ಸು[1]ಱಿಕಿಱುತ್ತೆ[2]ಪ್ರಾಣ್ಗಳನಕ್ಕು ॥
ತ್ತೊ[2]ಱೆವ ಪೆಱ[3]ವಾಯು ನೆತ್ತರ ।
ನೊಱಗಿರ್ದುವು ತಱಿಯ ನಾಯ್ಗಳ್[4]ೕರೊಂದೆ[4]ಯೊಳ್ ॥　　　　　　　　॥೧೩॥
ಪಿಡಿನುಗಿಯೆ ಕಿಱ್ತು ಪಂದಿಯು ।
ಪೆಡದಲೆಯೊಳ್ ಸಿಲ್ಕಿ ಪಲ್ಗಳೆಡವೊಗದೊಳ್ ಕ ॥
ಪ್ಪಡವಂತೆ ಕೂಡಿ ಜೋಡಂ ।
ಪಡೆಮುಱಿಮುವು ವಿಶ್ವಕಮು್ಗಳ್ ಕೆಲವೆಡೆಯೊಳ್ ॥　　　　　　　　॥೧೪॥

ವ॥ ಅಂತು ಜವನೊಕ್ಕಲಿಕ್ಕಿದಂತೆಯುಂ, ಮಾರಿ ಮಸಗಿ ಚಿಗುಳ್ದುಱಿದಂತೆಯುಂ, ಕಿಱುದೊಡೆ ಕೊಯ್ತ್ವೆಗೆ, [5]ಕಡೆವಾಯ್[5] ಕಡಿವೇಗೆ, ಕೊರಲ್ ಬಳೆವ್ವೇಗೆ, ಮೋಱೆ ಮುಕ್ಕುವ್ವೇಗೆ, ಬಸವಱಿವ ಜವವಱಿವ ಬಾಯ್ವಿಡುವ ದೆಸೆಗಿಡುವ ಬಿಱುತೋಡುವ ನೀರಂ ಬೇಡುವ ತಲ್ಲಣಿಸುವ ಮಲ್ಲಣಿಸುವ ಬಟಿಲ್ದು ಬೀೞ್ವ ತಡವಡಿಸುತ್ತೆೞ್ವ ಗೋವರ ಗೊಂದಣವುಮ ನಂಜದಿರಿಮುಂಜದಿರಿವೊಂದು ಮುಟ್ಟೆವಂದು ಬೀದಿವರಿವ ಕೆಂಗಲ್ಮಸಗಿ ಕೊಲ್ವಕೃತಾಂತನ ಕೋೞಣನಂತೆ ಕೆಳರ್ದು ಕೊಲುತ್ತಮಿರ್ಪ,　　　　　　　　॥೧೫॥

ಸೂಕರನಂ ಕೆಂಡಂ ಕಲಿ ।
ಮೂಕವರಾಹನನೆ ಕಾಣ್ಬವ್ರೋಲರ್ಜುನನು ॥
ದ್ವ್ರೀಕರನಂ ಕೊರ್ಧಾರುಣ ।
ಕೇಕರನಂ ಸಂಯುಗಾರ್ಜುನಂ ಕಟ್ಟಿದಿರೊಳ್ ॥　　　　　　　　॥೧೬॥

ವ॥ [1]ಅಮು[1]ಕಮ್ಮಱರಡೆಯಂ ಕೊಱೆವಂತಿರ್ಪ ಪೆಬಾರಯುಂ, ಸಿಟ್ಟೆಲುವ ನಡ್ಡಗಚಿರ್ದಂತಿಪ್ಪ ದಾಡೆಗಳುಂ, ಪಲವ್ರುಂ ಪೆಣಂಗಳ್ನಡಸಿ ಕೊಂಡಿರ್ದಂತ ಪ್ಪಣಲ್ಗಳುಂ, ಪೊಡವಿಯಂ ಪೊಡೆದು 'ಕೊಲಲ್'ತ್ತಿದ ಮಾರಿಯ ಮಿಱ್ತುವಿನ

---

ಪಾ— 1 ಱುಕಿಡುತ್ತೆ. ಖ॥　　2 ಜ್ಯೊಱತ; ಜ್ಯುಱತ. ಖ॥
3 ಕಟವಂ ಚ॥　　4 ಅಂತು. ಖ॥　　5 ಕೆಲಕ್ಕೆ. ಚ॥

ಕಯ್ಯ ತಳಂಗಳಂತಿರ್ದ ಕಿವಿಗಳುಂ, ಕಱಿಯ ಪಿರಿಯ ಪಾವಂ ನುಣ್ಣನೆನುಂ
ಗಿ ಪಾಯ್ಸುವಂತಿರ್ದ ಬಾಲಮುಂ, ಉರ್ಕಿನ ಕಣೆಯೊಳ್ ಸೂಜಿಯೆ ನೆಗೆ
ದಂತಿರ್ದ ಮೆಯ್ಯ ರೋಮಮುಮನುಗುರ್ವವಸೆಯೆ ದಬ್ಬಣದಂತೆ [1]ನಿಬ್ಬಣ[1]
ಮಾವ ಕೊಡಲ್ಗಳೊಳ್ ಕೋದ ಪೆಣಂಗಳಂ ಪ್ರೋತ್ರಮೆಯ್ದದೆ ಪಡೆಯುಂ ಪಿಡಿ
ದು ಪ್ರೇಡೆಯೊಳ್ತೊಂಕುವಂತೆಯುಂ, ಪೋಱುವ ಪೆಣನನಡಿಸಿ ತಿನೆ ಕಡೆವಾ
ಯೊಳ್ ಸುಱಿವ ನೊರೆನೆತ್ತರಿಂದುಡಿವ ಪೋಱುವಡುವ ಕೋಡೆಲ್ವುಗಳಂ
ತಿಟ್ಟನೆ ತಿರಿವ ಕೋರದಾಡೆಗಳಂ ಕೈದುವೆರಸು ಮಾನಸರಂ ಮೆಲ್ವಲ್ಲಿ ಬಾ
ಯೊಳ್ ಸೋರ್ವ ಬಳ್ಳಿಗರುಳನಲ್ಲೊಗುವಲಗಿನುಡಿಗಳಂ ನಾಳಂಬೆರಸು ನೆ
ಯ್ದಿಲಂ ಮೇವ ಮದಕರಿಯಂತೆಯುಂ, ಕಿಚ್ಚಿನ ಗೂಂಟಮಂ ಬೆಟ್ಟಿದಂತೆ
ದಡಿಗವೆಣವ ನಟ್ಟೆರ್ದೆ*ಯೊಳ್ ನಟ್ಟ ಕಾಲಿಂ ತಾಂ ತಿಂಬ ಜಗಮಂ ತವೆ ತಿಂ
ದಪ್ರೆಂದು ಕಾಲಂ [2]ಮುಳಿಮ[2] ಕೋಣನಂ ಕೋಳದೊಳಿಕ್ಕಿದಂತೆಯುಂ,
ಗಂಟಲೊಳ್ ದೊಡ್ಡವೆಣನಡ್ಡಂ ಸಿಲ್ಕೆ ಮೆಲ್ಕಂ ಮಗುಟ್ಚುವುದುಂ ನೆತ್ತರುಂ
ನೆಣನುಂ ಕರುಳುಂ ಕಬ್ಬಸಮುಮೆಲ್ವುಮಡಗುಮೊಡಗಲಸಿ ಸುರಿದು ಮುಂ
ದೆ ಕುಪ್ಪಿಸಿ ಕುಪ್ಪೆಯಾಗಿ ಮಾನಸರಂ [3]ತೆಗಿಸಿ[3] ರಕ್ಕಸರ ಮುಂದೆ ರಾಸಿಗೆ
ಯ್ದಂತೆಯುಮಾಸುರಮಾಗಿ ಕೇಸರಂಗೆಯ್ದು ಕಿವಿಗೆಯ್ದಿದ ರಣ[4]ಧೀರ[4]ನ
ಧನುರ್ಗುಣಧ್ವನಿಗೆ ಕಂಗನೆ ಕನಲ್ದು ಕಿಡಿಕಿಡಿವೋಗಿ ಕಿಡಿಯುಂ ಕಾಱುವಂತೆ
ದಾಡೆಗುಟ್ಟಿ ಪ್ರಟ್ಟಿದ ಕೆಂಡದಿಂ ಮೊಗೆದ ಕೂಂಗಲ್ ಕವುಱುನಾಱೆ ಕೇಱಿ ಬ
ಪರಿಬಲಪ್ರಳಯಕಾಲನ ಗಾಳಿಗೇವೈಯ್ಸಿ ಬಾಯ್ಗುಟ್ಟಿ [5]ಬೆಚ್ಚನೆ[5] ಬಿಟ್ಟ ದಿ
ಟ್ಟಿಯನಟ್ಟಿ ಮೂಗಂ ತೂಗಿ ಮೊಗಮನೆತ್ತಿ ಮೆಯ್ಯಂ ನಿಮಿರ್ದ ಅದಿರದಿ
ದಿರೆಱುವೆಕ್ಕಲಪಂದಿಯಂ ಕಂಡು ಕಿಟಿಕಾಪ್ರವೇಯಸೌಪರ್ಣಂ ॥ ೧೭॥

ಭೂಕಂಪಂಗೊಳ್ವಿನೆಗಮಹಿಯುಂ [6]ಪ್ರತ್ತಿನಿಂ[6] ತೋಡಿಕೊಳ್ವಂ ।
ತಾರ್ಕ್ಷ್ಯಷ್ಟ್ರಂಗೆಯ್ದಿರದೆ ದೊಣೆಯಿಂ ನಾಱಿಯೊಳ್ ಪುಯ್ದು ಲೋಕ ॥
ಪ್ರಾಕಾರಾಂಕಂ ಪಲಸಿನೆಲೆಯುಂ ಪ್ರೋಲ್ವ ಶಾತಾಸ್ತ್ರವಂ [7]ಕಾ[7] ।
ಯ್ದಾಕರ್ಣಾಂ[8]ತಂ ಮಲರೆ[8] ತೆಗೆದಾ ಕ್ರೋಡನಂ ಕೋಡದೆಚ್ಚಂ ॥೧೮॥

ಪಾ— 1 ನಿಬ್ಬರ. ಚ॥ 2 ಮುನಿದು ಕ॥ 3 ತೆಗಪಿ. ಕ॥ 4 ಧೀರ. ಕ॥
5 ಬೆಳ್ಬನೆ ಚ॥ 6 ಕೊಕ್ಕಿನಿಂ. ಖ॥ 7 ಕ. ಖ॥ 8 ತಕ್ಕಲರೆ. ಖ॥

ವ॥ ಅಂತಿಸುವ್ರದುಂ,

ನೊಸಲಂ ಕೋೞಲ್ ತಾಗೆ ಕೋಲಂ ತಿರಿಪುದು ಪೆಱಗಣ್ಗೆರ್ಚೆ ಬಾಣಂ
ಪರಾಹಂ । ಮುಸುಕಂಗುಂದಿತ್ತು ತನ್ನೀರ್ವೆಸಸನನೆಸಕದಿಂ ತೀರ್ಚೆ ಬರ್ಪಂತೆ
ಬಂದೆ ॥ ಯ್ಪ್ಸಿ ಸರಲ್ತತ್ತ್ವಾಕರಂ ಸುರ್ಕಱಿನುದು ಕ್ಷ್ರೆಡವಟ್ಟಂತೆ ತತ್ಪಾದ
ಪಂಕೇ । ಜಸಮೀಪಕ್ಕಾಗಿ ಕಾಂಡಂ ಕೆಡೆಯೆ ಕೆಡೆಯುತುಂ ಪಂದಿ ಬೆನ್ನಿ
ತ್ತುದಾಗಳ್ ॥ ॥೧೯॥

ವ॥ ಅಂತು ಪೊಕ್ಕು '[1]ಪಿಂಡುಂ[1]' ಪೊಱಮಟ್ಟು ಮುಂದುಂ ಪೆಸಂಗಾಲೊಳಡಂ
ಗಿದ ಬಾಲಮುಂ, ಬಟ್ಟಿತ್ತಾದ ಬರಿಯುಮೊಳಪೊಕ್ಕೀರಳ್ಕೆಯುಂ, ಬಗಿದ '[2]ಬೆ
ನ್ನ ಬಿರಿವುಂ,[2]' ತೆಗೆದ ಬಸಿಱುಂ, '[3]ತಿರುಪಿದ[3]' ಕಿವಿಯುಂ, ಜಂತ್ರದ ಪಂದಿಯ
ಬಾಯಂತೆ ಬೆಟ್ಟೆಯಿಲ್ಲ ಬಾಯುಂ ಬೆರಸು ನಾಲ್ಕುಂ ತಳವುಂ ತೋಱುತ್ತುಂ
'[4]ತಲ್ಲಣಿಸಿ[4]' ಪಾಯ್ದು ಪೋಪ ಪೊಳ್ಳವಂದಿಯಂ ಕಂಡು ಮುಂದೆ ಬಿರ್ದ
ಬಾಣಮಂ ಬಾಗಿಕೊಂಡು ಮಣ್ಣಂ ತಿಮಿರ್ದು ಕಳೆದು ಕೆಳೆಯನಂ ಕೂಡಿ
ಕೊಂಡು ರಕ್ಕಸನಂ ಬೆಂಗೊಳ್ವ ಲಕ್ಷ್ಮಣನಂತೆ ಬೆಂಗೊಂಡು ಬೞಿಯ
ನುೞಿಯದೆ ಪರಿಯೆ ಕೆಯ್ವೊಲನುಮಂ '[5]ಬೆಯ್ವೊ[5]'ಲನುಮಂ ಕಱುಂಬುಮನಿ
ಱುಂಬುಮಂ ತಾಗುಮಂ ಬಾಗುಮಂ ಪಳ್ಳಮುಮಂ ಕೊಳ್ಳಮುಮಂ ನೆಳಱು
ಮಂ ಕಳಱುಮನೆಱುಗಲುಮಂ ಗಿಡುದುಱುಗಲುಮಂ ದರಿಯುಮಂ ಕುಮ್ಮ
ರಿಯುಮಂ ಪೊರಡುಮಂ ಕೊರಡುಮಂ ಸುೞಿಯುಮಂ ಕುೞಿಯುಮಂ ಮ
ೞೆಯುಮಂ ನಾನಲುಮಂ ಬಾನಲುಮಂ ಸಡಿಂಬಮುಸಿಡಿಂಬಮಂ ಪರಲುಮಂ
ಪುರಿವರಲುಮಂ ಕಿಸುಗಾಡುಮಂ ನೆಗ್ಗಿಲ್ಗಾಡುಮಂ ಸಿಡುವ್ರಲ್ಲುಮಂ ಮಣಲು
ಮಂ ಮಣ್ಣಾಣಲುಮಂ ತರಿವಣಲುಮಂ ಗುಗ್ಗರಿಗಲ್ಲುಮಂ ಗುಂಡುಗಲ್ಲುಮಂ
ಮುಳ್ಮರಗಾಡುಮಂ ಪೆರ್ಮರಗಾಡುಮಂ ಬೆಟ್ಟಮಂ ಘಟ್ಟಮಂ ಬಿದಿರು
ಮಂ ಓದಿರುಮಂ ಬೆತ್ತಮುಮಂ ಮುತ್ತಮುಮಂ ಬಳ್ಳಿಯುಮಂ ಕಳ್ಳಿ
ಯುಮಂ ಕಳೆದು ಪೋಗಿ, ॥೨೦॥

---

ಪಾ— 1 ಪಿಂಡು. ಚ॥ 2 ಬೆಂಬಿವುಂ. ಕ॥ 3 ಕೆಱಪಿದ. ಕ॥ ಕಱುಪಿದ, ಚ॥
4 ಸರಳಿಸಿ. ಚ॥ 5 ಬೆಳ್ವಲ ಖ॥ ಜ॥

ಸಾಟೋಪಭೂಪಚಾಪ ।
ಜ್ಯಾಟಂಕಾರಕ್ಕೆ ಸುಗಿದು ಸಮದೇಭಕರೋಧ ॥
ನ್ಮ್ರೋಟಿತವಹೀಜವಂ ವಿಂ ।
ಧ್ಯಾಟವಿಯಂ ಪೊಕ್ಕುದಾಮಹೋಗ್ರವರಾಹಂ ॥ ॥೧೧॥

ವ॥ ಅಂತು ಪೊಕ್ಕು ಸೂಜಿ ಸಲ್ಲದ ಪೆರ್ಮರಂಗಳೊಳಗೆ 'ಮುದುಕಿ' ಮಾಯುವಾಗಿ ಪೋಪುದುಂ ನಿಂದು ಪರಿಭಾವಿಸಿ ಪಿರಿಯ ಮರದ ನೆಟಿಲ್ಗೆ ಸಾರ್ದು ಬಿಲ್ಲನೂಱಿ ಕೊಪ್ಪಿನೊಳ್ ಕೈಯಂ ಸಾರ್ಚಿ ನಟ್ಟದಿಟ್ಟಿಯಿಂ ಜಾನಿಸಿ ಬಿಲ್ಲುಂ ಬೆಱಗುವಾಗಿ ತನ್ನನುಚಿತಾವೇಗಕ್ಕಮಯಥಾಯಥೋದ್ವೇಗಕ್ಕಂ ಮನದೊಳ್ ನಕ್ಕು ಕುರುಳ ಸುರ್ಬಿಂ ಪುರ್ಬಿಂಗಿೞಿವ ಬೆಮರ ಬರಿವ್ರೊನಲಂ ಸುಟ್ಟುಂಬೆರಲಿಂ ತೊಡೆದೀಡಾಡುತ್ತುಂ ತನ್ನ ಬರವಂ ನೋಡುತ್ತುಂ ನಾಣೆಯುಂ ಬೞಲ್ದು ಜೋಲ್ದು ಜಾನಿಸುತಿರ್ದ ರೂಪಕಂದರ್ಪದೇವನಂ ಮಕರಂದನೆಯ್ದೆವಂದು ಕೆಲದೊಳ್ ನಿಂದು ತಿಱಿದು ತಂದ ತಳಿರಿಂ ಬೀಸಿ ಮುಗುಳ್ನಗೆಯಂ ಮೊಗಕ್ಕೆ ಸೂಸಿ ಮೆಲ್ಲನಿಂತೆಂದಂ:— ॥ ೧೨॥

ಇಂ ಧ್ಯಾನಿಸಲೇಂ ಕೃತನಯ ।
ನಾಂಧ್ಯಮನರುಣಾಶ್ಮರಶ್ಮಿಸೂತಪ್ರಾತ ॥
ಸ್ಸಂಧ್ಯಮನವಲೋಕಿಪವೋಲ್ ।
ವಿಂಧ್ಯಮನಿದನುೞಿದು ಬಿನದಮಾವುದುಮುಂಟೇ ॥ ॥೧೩॥

ನಡುವಗಲಾದುದು ನೀಂ ನೀ ।
ರಡಿಸಿಬೆಯುದಕಾಶ್ರಯಂಗಳಂ ಕಾಣ್ಬನ್ನಂ ॥
ನೞಿವಮೆನುತ್ತಲ್ಲಿಂದಂ ।
ನೞೆದರ್ ಬಿಂಮೊಂಬ ಬಿಂಜಡಡವಿಯೊಳವರ್ಗಳ್ ॥ ॥೧೪॥

ಅಲ್ಲಿ ಮರವಾಯ್ದು ಕೊರ್ಬಿದ ।
ಪಲ್ಲಿಂ ಪೆರ್ಮರನನಡರ್ದು ಪರ್ಬಿದ ನಾನಾ ॥
ವಲ್ಲಿಗಳಿಂ ಕಟ್ಟಿಲೆ ತನ ।
ಗಲ್ಲದೆ ಮಾರ್ಮಲೆವುದಿಂದುಗಂ ದಿನಪತಿಗಂ ॥ ॥೧೫॥

---

ಪಾ— 1 ಮುದುಗ್ಗಿ, ಮದಿಗ. ಖ॥; ಮದಕಿ ಚ॥

ಎಲವದ ಬೇಲ ಚೆನ್ನಗೆಯ ಪೊನ್ನೆಯ ಕವ್ಮ್ಕರದಾರ ಕೇರ ನೇ ।
ರಿಲ ಸಿರಿತಾಳೆಯಿಂಗುಳದ ನೆಲ್ಲಿಯ ನೀವದ ಸೀಲೆದಮಾಲದಿಂ ॥
[1]ಚಿಲ[1]ಕರಿಬೇವಿನಂಬಡೆಯ ತಾಟೆಯ ತಂಡಸಿನಾಸಿನಾನೆಬೊ ।
ಬ್ಬಲಿಸುರನೇಱಿಲಂಕೊಲೆಯ ಸೆಳ್ಳ ತಮಾಳದ ಪಾರಿವಾಳದಾ ॥

ತವಕಿನ ತಾಳ ತೆಂಗಿನ ತರೆಕಿನ ತುಂಬುರ ಚೆಲ್ಲ ಬೆಲ್ಲವ ।
ತ್ತವ ಬಿಳಿಯತ್ತಿಯಿಪ್ಪೆಯ ಮರಂಗಳ ಕೊಂಬುಗಳಂಬರಂಬರಂ ॥
ಪ್ರವಿಮು ಪೊದಟ್ಟು ಸುಬಿಡರೆ ಪರಿರೆ ಕಾರಿರುಳ್ಗೋಳ್ಕೊಂಬುಗೊಂ ।
ಡುದೆನೆ ಕಸಂಗಿ ಕಟ್ಟಲಿಸುತಿರ್ದುದು ಕಾನನವೆತ್ತ ನೋಡೆ ತೊಡಂ ॥

ವ॥ ಅದಲ್ಲದೆಯುಂ,

ಘಳನೀಮೀಳತ್ತಮಾಳದ್ಯುತಿಪುಳಿನತೆಯಿಂ ನೀಳಶೈಳಾಂಬುದಶ್ಯಾ ।
ಮಳಸಂಕೀರ್ಣಾಂಶುವಿಂ ಲುಬ್ಧಕಬಳಶಬರೀಕೇಶಕೃಷ್ಣಪ್ರಭಾಸಂ ॥
ಕಾಳದಿಂ ಭಲ್ಲೂಕಕಾಳೋರಗಕುಳಕಳತೋನ್ಮೇಷಕಲ್ಮಾಷಮಾಷಾ ।
ವಿಳಕಾಂತಿವ್ರಾತದಿಂ ನೂಮಡಿಸಿದುದು ವನಾಗಾರನೀರಾಂಧಕಾರಂ ॥

ಬಿಟ್ಟ ಕೆಂದಿಂದಮೇ ಬೂ ।
ತಟ್ಟಿದುದೆನೆ ದಿನಕರಂಗೆ ತತ್ಕಾನನದೊಳ್ ॥
ಮುಟ್ಟಿದುವಜಗರಮುಖದಿಂ ।
ಪುಟ್ಟಿದ ವಿಷವಹ್ನಿಯುಗುಳ್ವ ಕಬೊಗೆ ಮುಗಿಲಂ ॥ ॥೨೯॥

ತಲೆವಣಿಯ ಫಣಿಗಳುಂ ಸುಲಿ ।
ವೊಲದಡಗಂ ಪೊತ್ತ ಬೇಡರುಂ ಮರಗಳ ಕ ॥
ಟ್ಟಲೆ ತಲೆಮುಟ್ಟಿಡಿದಿರೆ ಮುಂ ।
ದಲೆಯೊಳ್ ಸೊಡರಿಟ್ಟು ನಡೆವ ತೆಱದಿಂ ನಡೆದರ್ ॥ ॥೩೦॥

ಪ್ರದಿಡಡೆಯ ಕಟ್ಟಲೆ ಸೂ ।
ಲದೊಳಕ್ಕಿದೊಡಿಱಿವ ಸೋರ್ವ[2] ತಿಂಗಳ ಪೆಣದಂ ॥

---

ಪಾ — 1 ಬೆಲ ಚ॥ 2 ಸಡೆದು (ಡಿಳಿದು) ಸಾರ್ದ, ಖ॥; ಡಗಿದು ತಿಂದ, ಗ॥

ನ್ನಡು ತಡೆವಂತಾಮುದು ಮ !
ಲ್ಲಡಿ ಚಳತುದು ಪ್ರೋಪ ವಿಪುಳವಿದ್ಯಾಧರನಾ ॥ ॥೪೩॥

ಮೊನೆವರಲೊತ್ತೆ ಮೆಲ್ಲಡಿಗಳಂ ಬಿಸಿಲಚ್ಚೆ ಬಟಿಲ್ದ ಮೆಯ್ಯ್ಯ ಬಿ ।
ಟ್ಟನೆ ಬಿಱುಗಾಳಿ ಬೀಸುತಿರೆ ಮೆಲ್ದುಟಿ ನಿಷ್ಠುರಮಾಗೆ ಗಂಟಲು ॥
ಳ್ಳನಿತುವರಂ ತೆರಳ್ದೊಣಗೆ ನಾಲಗೆ ನಿಬ್ಬರಮಾಗೆ ಕಣ್ಗೊಚ್ಚಿದರ್ ।
ಕನಲದೆ ನಂದೆಪ್ಪೊಯ್ದು ಪೆಱಿನಾಗೆ ತೃಷಾತುರನಾದನಾನೃಪಂ ॥ ॥೪೪॥

ತೇಜಕ್ಕೆನ್ನೊಳ್ ಸೆಣಸುವ ।
ನಿಜಜನಪತಿಯೆಂದು ಕಾಯ್ದು ತೆಱವಳ್ದುವರ್ಗಂ ನೀ ॥
ರೇಜಸ್ಸಂ ಕಾಯ್ದು ಕದಿ ।
ಸೂರ್ಜಗೆಗಳಂದೊತ್ತಿ ನೆತ್ತಿಯುಂ ಕುತ್ತುವವ್ರೋಲ್ ॥ ॥೪೫॥

ಕಡುವಿಸಿಲಳುವರ್ಂತಿರೆ ಕೆಂ ।
ಪಡಮುರ್ದು ಮೊಗಮಿರ್ಪ್ರ ಸಾವರ್ವ್ರೊಲ್ ಕೊರ[1]ಳೆಡೆಯುಂ[1] ॥
ದೆಡೆಯುಡುಗದೆ ಬೆಮರ್ವರ್ನಿಗಳ್ ।
ಬಿಡೆ ಬಱಬಱ ಬತ್ತಿದತ್ತು ಬಾಯ್ದೆಱೆ ನೃಪನಾ ॥ ॥೪೬॥

ಕುಸಿಯುತ್ತುಂ ಕುಂಟುತುಂ ನುಣ್ಮಳಲೊಳಡಿಗಳಂ ಪಾಸಿ ಮೆಟ್ಟಿ
ತ್ತುಮೆಂಟುಂ । ದೆಸೆಯುಂ ರಕ್ತಾಲಸಾಪಾಂಗದಿನೆಡವಿ ಜಲೋದ್ದೇಶಮಂ
ಭಾವಿಸುತ್ತುಂ ॥ ಬಿಸುಸುಯ್ಯಂ ಸುಯ್ಯುತುಂ ಪೆಮರ್ಳಗಳ ನೆಬಲಂ ಪೊ
ರ್ದುತುಂ ಕುಳ್ಳಿರುತ್ತುಂ । ವಸುಧೇಶಂ ಕ್ಲೇಶದಿಂದಂ ನಡೆದನಡವಿಯೊಳ್
ದುಃಖಮೇಂ ಸೀಯನುಂಟೇ ॥ ॥೪೭॥

ನೆವದಿಂ ನೀರ್ದಾಣವಂ ಸೂಚಿಸುತಲೆಗೊಡೆಯುಂ ಸಾರ್ಚುತ್ತುಂ ಸ್ವೇ
ದಬಿಂದು । ಪ್ಲವಮಂ ಸಿಂಪುತ್ತೆ ಕುಳ್ಳಿರ್ದೆಡೆಯೊಳಡಸಿ ನೆಮರ್ಗು
ತುಂ ಮಾರ್ಗದೊಳ್ ಪ । ಲ್ಲವಮಂ ಪಾಸುತ್ತೆ ತನ್ನಾಸಱಿನಱಿಯದೆ ಸಂತೈ
ಸುತುಂ ಕೈಗೊಡುತ್ತಂ । ದವನೀಶಂಗಾಸೆಯಾದಂ ಪ್ರಿಯಸಚಿವಸುತಂ
ಭೃತ್ಯನಿಂತಾಗವೇಡಾ ॥ ॥೪೮॥

ಪಾ— 1 ಲಡಿಯಿಂ. ಚ॥

ಅಂತಳವಿಗಳಿವ ಪಿಪಾಸೆಯುಂ ಪಸಿಯುಮಸಮಯುಂಬಡೆದು ಮುನ್ನಂ ತನ್ನ ಮನಮನಳುರ್ ನೋಂಕಿ ಕಳೆದು ಕಾಮಾನಳನಳುರ್ದ ಕಳೆದಂ ತಳುರೆ ಬಟಿಲ್ದಬಿಲ್ದಂ ಧೃತಿಯನಗಳಂಬಿಸಿ ಬಿಸಿಲಂ ಬೆನ್ನೊಳಿಕ್ಕಿ ನೀರ್ನೆ ಟಿಲನಜಿಸಿ ಗುಗ್ಗರಿಗಲ್ಲ ಪನರಲ ತಪಿವೊರಬಿನ ಸುಚ್ಛ್ವಣಲ ನೀರಜಿದು ಪರಿವ ದಿಂಟೆಯ ದರಿಯ ಕುಳಿಸು ಕುತ್ತುಬಿ ಕುಜಿಳ್ಳನಂ ಕಂಡಪಬಿ ಬಟಿವಿಡಿಸು ಬೆಳೆದ ಬಳ್ಳಿಯ ಪಸಿಯ ಪುಲ್ಲ ಪ್ರಾಲಿಯ ನಾಸಲನಬಿದು ನತೆ ವಾಗಳೊಂಬೆಸೆಯೊಳ್ ॥೪೯॥

ಮಿಱುಗುವ ಬೆಳ್ಳಗೆಗಣ್ಬೊಣ ।
ರೊಪ್ತೆಯ ಜಲದೊಳಗೆ ಪೊಳೆಯೆ ನೀಗುರ್ದಿತ್ರಮಮಂ ॥
ಮಱೆದೆಳಮೀನ್ಗಳ್ ತ್ತ್ರೀಂ ।
ಕಿಜುವೇಡಿತಿ ತುಡುಕೆ ಶಬರನಂ ನಗಿಸಿದಳೋ ॥ ॥೫೦॥

ಅದಂ ಕಂಡವಸಿಪಾಳನಿನಳುವಿಜಾಜಳವಮುಂ ದೃಶ್ಯಮಲ್ಲದೆ ಪರಿಸ್ಪೃಶ್ಯ ಮಲ್ಲೆಂದಲ್ಲಿಂ ತಳರ್ದು ನಡೆಯೆ ಮತ್ತೊಂದೆಸೆಯೊಳ್ ॥ ॥೫೧॥

ಮೊಗದೊಳ್ ಕಣ್ ಪೊಳೆಯುತ್ತಿರೆ ।
ಬಗರಗೆಯೊಳ್ ಪೊಳೆವ ಮೀನ್ಗಳಂ ಕಂಡರಸಂ ॥
ಮೊಗೆವೊಡೆ ನೀರ್ನೆಱೆಯುವೆನು ।
ತ್ತಗಲ್ದನಲ್ಲಿಂದೆ ಕರುಣಮಾಱಿಸೆ ತೃಷೆಯಂ ॥
ಮತ್ತೊಂದೆಸೆಯೊಳ್, ॥೫೨॥

ಸುಱಿಸುಱಿವ ನೀರಸಿಲ್ಲಿಂ ।
ದೊಱೆದಂಬೂಕೃತದಿನುಕ್ಕಿಮುಗುಳ್ಗಳ ನೊರೆಯಂ ॥
ಪಱಿದಿಕ್ಕಿದಂತೆ ತುಱುಗಿ ।
ದೊರ್ಱಿತೆಯುನಿದು ಕರಡಿ ಕುಡಿಪ ತೆಱನೆಂದಱಿದಂ ॥
ಮತ್ತೊಂದೆಸೆಯೊಳ್, ॥೫೩॥

ಪುಲಿ ನೀರುಣುತಿರೆ ಪಾಯ್ದು ।
ಕ್ಷಲವಂದಿ ತದೀಯವಿಪ್ರಳಗಳವಿಗಳದಸ್ರ ॥

ಗ್ಜಲದಿಂ ಬಗರಗೆ ತೀವಿದೊ ।
ಡೆ ಲವಲಿಕೆಯಿನೂಡಿ ಪೋದುದೆಂದಱಿದರಸಂ ॥ ॥೫೪॥

ವ॥ ಅಂತು ಪೋಪಿನಮೊಂದೆಡೆಯೊಳಿಡಿದ ಮಱಲೇಱಿಗೊಂಡು ಬಳಸಿ
ತಿಳಿವಳ್ಳಿಱತೆಯೊಳ್ ॥೫೫॥

ನಿಮಿರ್ದ ಕೊರಲ್ ಮರಲ್ದು ಮಡಿಮೂಱಿದ ಮುಂದಣ ಕಾಲ್ಗಳಿರ್ದ ಪ।
ಕ್ಷ್ಮಿಮತನು ಜೋಲ್ದುರಂ ಪೆಱಗನಪ್ಪಿದ ಕೊಂಬುಗಳಾಲಿಸುತ್ತೆ ವಿ ॥
ಶ್ರಮಿಸುವ ಕರ್ಣಮುಳ್ಕುಗುಳ್ದ ಕಣ್ ಮಿಡುಕೋಡುವ ಕಂಠನಾಳಮುಂ ।
ದನುದಿರ್*ರೆ ನೀರನುಂಬೆರಲೆಯುಂ ಬರಲೊಲ್ಲದೆ ನೋಡಿದಂ ನೃಪಂ ॥೫೬॥

ವ॥ ಅದಂ ಕೆಲಕಿಕ್ಕಿ ಪೋಗೆ ಮುಂದೊಂದು ಮನ್ಮರದವ್ರೊಲ್‌ಬಿಗಿದ ಬ
ಗರಗೆಯೊಳ್ ॥೫೭॥

ಕಡುಬಡವಾಗಿ ಮುಂಬಯಕೆಯಿಂ ಬಿಸಿಲತ್ವೆ ಕರಂ ಬಱಲ್ದು ಮೆ । ಲ್ಗ
ಡುಕೆಂಗೊಳಲ್ಕಮೊಲ್ಲದಿರೆ ಮೆಲ್ಲಗೆ ತಂದು ಪೊದಟ್ಟಿ ಪೀಲಿಯುಂ ॥ ಪಿಡಿದು
ಮೊಗಕ್ಕೆ ನೀಡಿ ಕೊರಲಂ ತಿಳಿನೀರ್ಗಳನೀಂಟೆ ಕೊಂಡು ಬಾ । ಯ್ವಿಡು
ವ ಮಯೂರಿಗೇಂ ಮುಱಿದು ನೀಡುತುಮಿರ್ದುದೆ ಸೋಗೆ ಬೇಗದಿಂ ॥

ವ॥ ಅದಂ ನೋಡುತ್ತುಂ ನಡೆಯೆ ಮತ್ತೊಂದೆಡೆಯೊಳ್

ಕುಡಿದು ಚಳಲ್ಬಳಲ್ಗರೆಯೆ ನಾಲಗೆಯುಂ ಮಿಗೆ ನೀಡಿ ನೀರನೋ ।
ಗಡಿಸಿ ಮರಲ್ದು ನಕ್ಕಿ ತುಟಿಯುಂ ಕಡೆವಾಯ್ಗಳನಗ್ರಪಾದದಿಂ ॥
ತೊಡೆದು ತಡುಂಬಿ ತಾತೊಡಬಗೆತ್ತುವ ಮಾಗುಳಿಸುತ್ತೆ ಬಿಟ್ಟ ಕೆ।
ಞ್ಜೊಡಗರ್ಗಳನಿಕ್ಕೆಲಕ್ಕಲಸಿ ಪೋಪ ತರಕ್ಷುವನಮ್ಮ್ರತಕ್ಷುವಂ ॥ ॥೫೯॥

ವ॥ ಅದಂ ಪಿಂತಿಕ್ಕಿಯಾಪಲ್ಲದೊಳೊಳ್ಳನೀರನೆಲ್ಲಿಯುಂ ಪಡೆಯದೆ
ಪೊಱಮಟ್ಟು ಬಟ್ಟೆಗೊಂಡು ಪೋಗಿ ಪೋಗಲಾರದಸಕಳಿದ ಪಿಪಾಸೆಯಿಂ ಬ
ಸವಳಿವ ಮಾನವಮದನನಂ ಮಕರಂದಂ ಮೆಲ್ಲನೆ ಮೆಳೆಯು ನೆಱಲ್ಗೆ ತಂದು
ನೆಮ್ಮಿಸಿ ಕೊಂಡು ನಿರ್ಮಾನುಷಮಪ್ಪ ಕಾನನದೊಳ್ಪಾನೀಯಮುಮನರಸುವು
ಪಾಯಮನಾವುದೆಂದು ಕಿಂಕರ್ತವ್ಯತಾಮೂಢಂ ದಿಗವಳೋಕನಂಗೆಯ್ಯುತ್ತಿ
ರೆ ತೊಟ್ಟನೆ ಕಟ್ಟೆದಿರೊಳ್ ॥ ॥೬೦॥

ತಿಗ್ಮಾಂಶುದ್ಯೋತಿಗಡ್ಡಂ ಮಱಿವಿಡಿದುಡಿವಂಭೋಜಮುಂ ಭ್ರಾಜಿವೇಣೀ ಸ್ರಗ್ಭೃಗಾಳಿಬ್ರಜಂ ಪೀಲಿಯ ಪೊನವಳಿಯುಂ ಪೋಲೆ ಭೂಪಾಳಲೋಳ್॥ ದೃಗ್ಮೀನಂ ತನ್ನ ಲಾವಣ್ಯದ ತಿಳಿಗಡಲೊಳ್ಸ್ಫುಟಿವಂದಾಪೆ ಬಂದಳ್ । ದಿಗ್ಮೌಳೀಪಾಂತದೊಳ್ ಪಜ್ಜಳಿಸಿ ಪರಪುತುಂ ಕಾಂತಿಯುಂ ಕಾಂತಿಯೊರ್ಬಳ್ ॥

ಪದರಾಗಂ ಪಲ್ಲವಂ ಪೆರ್ಮೊಲೆಗೊಲೆ ನಳಿತೋಳ್ಗೊಂಬು ಕೇಶಂ ತಮಾಳಂ । ವದನಂ ಪದ್ಮಾಕರಂ ಮೆಯ್ ಲತೆ ತೊಡೆ ಕದಳೀಸ್ತಂಭಮಾಗಲ್ಕೆಮೆಯ್ವೊ ॥ ಚಿರ್ದ ಮಾರ್ಗಶ್ರಾಂತಿಯಿಂದಂ ಬರಲಱಿಯದ ಭೂಲೋಕಕಂದರ್ಪದೇವಂ । ಗಿದಿರ್ವ*ರ್ಪುದ್ಯಾನಲಕ್ಷ್ಮೀವಧುವಿವಳೆನೆ ತತ್ಕಾಂತೆ ಕಣ್ಗೆಡ್ಡಮಾದಳ್ ॥

ಆಕೆಯ ಲಾವಣ್ಯಾಮೃತ ।
ಸೇಕದೆ ತೃಷೆ ಮಱ್ಗಿ ತಕುರ್ಮಲ್ಲದೊಡಂತ ॥
ತ್ರ್ಯಾಕುಳಿತಚಿತ್ತನನವ ।
ಳೋಕಿಸುವನೆ ಸೋಲ್ತನಂತೆ ಮಾನವಮದನಂ ॥

ಅಲ್ಲಿಂ ಪೆಱಗೆ

ತಳದೆಳಗೆಂಪಿಂ ಪಳಿಕಿನ ।
ಕಳಶಂ ಕಿಸುಗಲ್ಲ ಕಳಶದಂತಿರೆ ತಳೆದು ॥
ತ್ಪಳದಳಧವಳವಿಳೋಚನೆ ।
ವಿಳಾಸದಿಂ ಮತ್ತಮೊರ್ವಳಂಗನೆ ಬಂದಳ್ ॥ ॥೬೪॥

ಬಳಗಳ್ಕಾಡುವ ಜಳದಿಂ ।
ಕಳಶಂ ಕಣ್ಗೆಸೆದುದಾಸ್ಯರುಚಿತಸ್ಕರನೀ ॥
ಖಳನೆಂದು ಪಿಡಿದೊಡಾಕೋ ।
ಮಳೆ ಭಯದೆದೆ*ರ್ವೊಯ್ವ ತುಹಿನಕರಬಿಂಬದವೊಲ್ ॥ ॥೬೫॥

ಆಕೆವೆರಸಾಕಾಂತೆಯೆಯ್ದೆವಂದು ತೃಷಾನಳತಪ್ತನಾಗಿರ್ದ ಚಂದ್ರೋದಯನ ಮೇಲೆ ಸೊದೆವಳೆಯುಂ ಸೂಸುವಂತೆಯುಂ, ಘನಸಾರಾಸಾರದಿಂ ಸವನಂಗೆಯ್ವಂತೆಯುಂ, ಚಂದನಚರ್ಚೆಯಂ ಚೆಲ್ಲುವಂತೆಯುಂ ಅತಿದೀರ್ಘ

ಧವಳಪಿಳ್ಳೋಚನಂಗಳನಡರೆ ನೋಡಿ ಸೇಡಿಲ್ಲದೆ ತೋರ್ಪನ್ ಖುಷ್ಯಾಶ್ರಮದ ಮುನಿಕುಮಾರಿಯರೆ ವಿವಿಧಮಹಾನುಭಾವಭಾಗನುವನ್ಯಾಂಗನಾಲಿಂಗಿತ ಕಂಠನಾವಂತೆ ತೋಱುವಪನೀಕಳಶಜಳದಿನೀಕುಳರತ್ನಕಲಶನ ಬಟಿಲ್ಕೆಯುಂ ಕಳೆದವ್ಮೃವನವಿಹಾರವಿನೋದವಮುಂ ಸಫಲಂಮಾಡಿಪೆಮಗಕ್ರುತಾರ್ಥತಾಕಳಂಕವುಂ ತೊಳೆವು ಕಳೆವುದೆಂದು ಕಳದಿಯ ಕೈಯ ಕಳಶವುಂ ಕೊಂಡು ನೀಡೆ ಮಕರಂದಂ ತೆಳೆದುಕೊಂಡು ||೬೬||

ಕಾಳ್ವರ್ ಜಳಕಳಶದಮು ಕರ |
ತಳವಂ ಸೋಂಕುವುದು ಮಾಲಿಗೊಂಡು ಶರೀರಂ ||
ಪುಳಕಿಸಿ ನಾಳದೊಳಾಕೋ |
ಮಳೆ ತೀವಿದ ಕಮಳನಾಳವುಂ ಕಳೆವಾಗಳ್ || ||೬೭||

ಪೊಕ್ಕು ಕದಂಪು ಪತ್ತಿ ಪೆರ್ಗೊಂಡ ಕೊರಲ್ಪುಣೆಚಿರ್ದ ಕೇನಿವಲ್ |
ಪೊರ್ಕ್ಕಡಗಿರ್ದ ಕಣ್ಣುರುಳಗೊಂಡರೆಬತ್ತಿದ ಬಾಯ ಬಟಿಲ್ದ ಮೆ ||
ಯ್ಯಕ್ಕುಱಿಸಿರ್ದ ಪೆರ್ಬಸಿಱುಗುರ್ವಿಸೆ ಬಂದನದೊರ್ವ ಪಾರ್ವನ |
ಲ್ಲೊಕ್ಕುಱಿತರ್ಪ ಕೈಪೆವೆನುರಂ ತುದಿನಾಲಗೆಯಿಂದೆ ನಕ್ಕುತುಂ ||೬೮||

ವ|| ಆಪಾರ್ವನ ಬರವಂ ಕಂಡರಸನೀದ್ವಿಜಂ ಬಾಡ್ದ್ವಿಜದಂತೆ ನೀರಡಸಿ ಬಾಯುಂ ಬಿಡುತೆ ಬಂದಪ್ಪನೆಯ್ದೆ ಬಂದೆನ್ನ ಮೊಗವುಂ ದೀನದೃಷ್ಟಿಯಿಂ ನೋಡದನ್ನೆಗಂ ಕೃಪಣೋಕ್ತಿಗಳಂ ಕಿವಿಗೀಡಾಡದನ್ನೆಗಂ ಸನ್ನೆಗೈದಾದೊಡಮೀತನತೃಷಾಗ್ನಿಯುಂ ಮಱ್ಗಿಸೆಂಬುದುಮಾಯರ್ಪಪ್ರತ್ರನಂತೆಗಯ್ಯೆಸೆಂದಿರ್ಪನ್ನೆಗಂ ಬೇಡದೆ ಬೆಸೆಗೊಳ್ಳದಾಬ್ರಾಹ್ಮಣಂ ಬಂದು ಮುಂದೆ ಕುಕ್ಕುರಿಸಿ ಕುಳ್ಳಿರ್ದು ಕೊರಲಂ ನೀಡಿ ಸುರ್ಬುಗೊಂಡ ಗಡ್ಡಮುಮಂ ಮೀಸೆಯುಮನಗಲೆ ನೂಂಕಿ ಪೇಱುವ ತಲೆಯೇಱಂತಿರ್ದ ಬಾಯೊಳಡ್ಡಗೈಯನಿಡುವುದುಂ ಮಕರಂದಂ || ||೬೯||

ಎಱೆಯೆ ಸಿಡಿಲ್ವ ನೀರ್ವರದ ನೀರ್ಪನಿಗಳ್ಪ್ರಸರ್ಸೋರ್ಗುಮೊಂಬಿನಂ |
ತುಱುಗಿರೆ ಮೀಸೆಯೊಳ್ಮಗುಳೆ ಕಣ್ಮಲರ್ಗಳ್ ಮಲರ್ದಳ್ಳೆ ಪೊಯ್ಯೆ ಮೆ ||
ಯ್ಯೊಱಗೆ ಕೆಲಕ್ಕೆ ಕಂಟಣಿಸೆ ಮೊಯ್ಮವಿರೊಯ್ಯನೆ ಕಂಠಕಂದಳಂ |
ತೆಱೆದು ಮಿಡುಂಕೆ ಮಱುಗಲ್ದರೆ ಪೀರ್ದನಸುಂಗೊಳೆ ಪಾರ್ವನಂಬುವಂ ||

ವ॥ ಅಂತು ಕಳಶದ ನೀರನೊಂದು [1]ಪನಿಯುಮನುಱಿಪದೆ[1] ತೆಗೆದು ತೀಗಿ ತಲೆಯುಂ ತೊಗಿ ತಾಂಬೂಳಯಾಚನಾನಂತರಂ ಹೃಷ್ಟನುಂ ಸಂತುಷ್ಟನುಮಾಗಿ ಮಹೀಪತಿಯುಂ ಪಲವು ಸೂೞ್ ಪರಸಿ ಮತ್ತಮಾವಿಪ್ರನಿಂತೆಂದಂ:-

ಮುಂಚುವುದೆ[2]ರೆವನನೀವಂ[2] ।
ಕಿಂಚಾನರ್ಘ್ಯಂ[3]ಯದವಸರೇ[3]ದತ್ತಮೆನು ॥
ತ್ತಂ ಚಲದಿನೀವುದಲ್ಲದೊ ।
ಡೇಂ ಚಾಗಮೆ [4]ದಾನಿ[4] ನೀನೆ ದಾನವಿನೋದಾ ॥ ॥೨೦॥

ಮೆಚ್ಚಿದೊಡೇನಿತರಜನಂ ।
ಮೆಚ್ಚದ ಪೆಣ್ ಮೆಚ್ಚೆ ಸೊಬಗನೆನಿಪು[5]ದರಿಗಣಂ ॥
ಮೆಚ್ಚೆ ಕಲಿ[5]ಯೆನಿಪ್ಪುದೆರೆವಂ ।
ಮೆಚ್ಚೆ ಮಹಾದಾನಿಯೆನಿಪ್ಪುದೀವರ ದೇವಾ ॥ ॥೨೩॥

ವ॥ ಎಂದಾಪೂರ್ವಂ ಪೋಪ್ಪುದುಮುಚಿತವಚನಂಗಳಂ ನುಡಿದು ನೃಪ[6]ತನೂಜಂ[6] ನಿಜೋದಾತ್ತವೃತ್ತಿದತ್ತವಿಸ್ಮಯಸ್ಮೇರಮುಖಿಯರಾಗಿರ್ದ ಮುನಿತನೂಜೆಯರಂ ನಿಜನಿವಾಸಕ್ಕೆ ವಿಸರ್ಜಿಸಿ ಬೞಿಯುಮಲ್ಲಿಂ ತಳರ್ದಾ ಕುಮಾರಿಯರ ಬಂದ ಪಜ್ಜೆವಿಡಿದು ಪೋಗೆವೋಗೆ, ॥೨೪॥

ಅವಗಾಹಂಗೈದು ಪೋದದ್ರಿಜಕರಿಗಳ ಕೈದುಂತುೞಿಂ ಕಾಯದಿಂದಂ ।
ಕವಿದೆತ್ತಂ ಪೊಕ್ಕು ನೀರೊಳ್ ಬೆರಸಿ ಬಸಿವ ನೀರ್ದಂದಲಿಂ ಗಲ್ಲವ್ರಣ್ಗಳ್ ॥
ಕವಿವನ್ನಂ ತಿಂಬ ಪೆರ್ದುಂಬಿಗಳನಿರಿಸುತುಂ ಕೊಲ್ಲದೀಡಾಡಿದುತ್ಕೈ ।
ರವಕಂಜಪ್ರಾಯಪುಷ್ಪಪ್ರಕರದ ಪುದುವಿಂ ಮೆಲ್ಲಿತಾದತ್ತು ಮಾರ್ಗಂ ॥೨೫॥

ವ॥ ಆಮಾರ್ಗಂಬಿಡಿದು ಬಿೞ್ದರ್ ಸರಸಸರಸಿಜಶಾಲೂರಕಕಲಶೈವಾಲಂಗಳೊಳಡಿಯಿಡುತ್ತುಮಿರ್ವರ್ ಕಿಱಿದಂತರಮಂ ನಡೆದು ಮುಂದೆ [7]ಮುಂದು[7]ಗೊಂಡು ಪೊಂದಗಡಿನ ಕಡಾರಮುಂ ಕಾದಿರ್ಪಂತೆ ಕಂಪಂ ಪೀರ್ದು ಕೆಂ

---

ಪಾ— 1 ಪನಿಯುಱಿಯದೆ. ಖ॥ 2 ದೆವರವನೀವಂ. ಕ॥, ದೆ ಬೇಗವಮನವಂ ಜ॥ 3 ಯದೇವ ಸಂ. ಖ॥; ಯುದವಸರಂ. ಜ॥ 4 ಚಾಗಿ. ಕ॥ 5 ದು ಗಡಣಂ ಮೆಚ್ಚೆಕಲಿ ಖ॥ 6 ಮನೋಜಂ. ಖ॥ 7 ಮಡು. ಜ॥

ಗಱಿಯ ಪೊಱೆಯಂತಪ್ಪ ಪೂಗಳಂ ಸುಱಿದು ಬಿರಿದ [1]ಸುಱಿಯಂ[1] ಸುತ್ತಿ
ನೇಲ್ದು ಜೋಲ್ದುಗೆವಣ್ಣಂ [2]ಮುಗುಳ್ದು ಮಿಗೆ ಮಗಮಗಿಸುವೆಳವೂಗಳಿಂ[2]
ಪರಿಮಳದ [3]ಬೀಡಲಂ[3] ಬಿಟ್ಟಂತಿರ್ದ ಪೊಂಗೇದಗೆಯಬೞ್ವೇಲಿಯನೊಳ್ಪೊ
ಕ್ಕಂತೆ ಪೊದೆ ತನಿಗಂಪನುಂಡು ಬಿಡೆಯುಂ ಪೊಱಮಡುವ ಮಱಿದುಂಬಿಗಳಿಂ
ರತ್ನಗರ್ಭೆ ನೀಲದ ಪರಲನುಗುೞ್ವ ಚೆಲ್ವು ನೆಲಸೆ ನೆಲಂ ಬಿಱಿಯೆ ಬೇರಿಂ
ಪಣ್ತು ಬಕ್ಕೆವಲಸುಗಳುಂ, ಗಾಳಿಯ ಕೋಳಿಂ ಕಟಿಲ್ದು ಪಳಿಕಿನ ಪಾಸಱೆ
ಯೊಳ್ ಫೞಿಲನೆ ಬಿೞ್ದು ಬಿಕ್ಕನೆ ಬಿರಿದು ತೋರಗಾಯ್ಗಳನೊಕ್ಕ ತಿರುಳಂ
ನಕ್ಕಿ ನಾಲಗೆಯುಂ ನಕ್ಕುವಂತೆ ತೋರ್ಪ ನಿಜಪ್ರತಿಬಿಂಬಕ್ಕೆ ಪುರ್ಬನಿಕ್ಕಿ
ಪಲ್ಲಂ ಕಿಱಿವ ಪುಲ್ಲೋಡಗಂಗಳ ಮುದ್ದಿಂಗೆ ಮೆಚ್ಚಿದಂತೆಳನೀರನವಱ
ಬಾಯೊಳ್ ಬಸಿವ ಬೆಳ್ದೆಂಗುಗಳುಂ, ವಿಪುಳಫಳಕುಚಭರಂಗಳೆಳನೀರ್ಪಾ
ಲ್ಗಳಂ ಬಾಲಸಸ್ಯಂ[4]ಗಳನೂ[4]ಡುವ ಚೆಂದೆಂಗುಗಳುಂ, ಎಲೆಲೆವಾೞೆ[1]ಗೊ
ಯ್ಕಗಳಿಂ[1]ಬಂದಪ್ಪವೆಂಬ ಭಯಮಾದಂತೆ ಮಂದಾನಿಲನಂ ಕೊರಲ್ಕುಸಿವಿನಂ
ಪೊಱಿಸಿ ಸರಸಶೀತಳಪರಿಮಳಮಂ ಪಾವುಗಳಿರ್ದಲ್ಲಿಗೆ ಪೊವ್ರಡಂಗಳ್ಪ್ರುವ
ಮಳಯಜತರುಗಳುಂ, ಶೀಕರಾಸಾರಸುರಭಿಮಾರುತನಿಂ ವನಕರಿಕಳಭಂಗೆ
ಳುಮಂ ಶಬರಿಮನೋಮುದಕರಿಗಳುಮನೊಡನೆ [2]ಸೊರ್ಕಿಸುವ[2] ಸಲ್ಲಕಿಗೆ
ಳುಂ, ಮದಕರ್ದಮಮುಮಂ ಬಿಡುವ ಮದಕರಿಗಳಂತೆ ಪಣೆ ಮಗುೞೆ ನಿರ್ಯಾ
ಸಮನೊಕ್ಕುಸೂಸುವ ಗುಗ್ಗುಳಂಗುಳುಂ, ಕಣೆ ಕಾಲುದ್ದವಾಗೆ ಪಗಿನ ಪ
ರಲಂ ಪರಪ್ಪುವ ಕರ್ಪೂರಂಗಳುಂ, ರಜಮುಮೆಸಳುಂ ಮೊಟಿಕಾಲ್ವೆರಮಾ
ಗೆ ಬಿರಿಮುಗುಳಂ ಸುರಿವ ಸುರಿಯಿಗಳುಂ, ಪೊಂನ ಸಿಪ್ಪಂ ಸೂಸು
ವಂತೆಸಳನಿಕ್ಕುವ ಕೊಸಗುಗಳುಂ, ಚಿನ್ನ ಪೂಗಳಂ ಚೆಲ್ಲುವಂತರಲ
ಸಂಕುಳಮಂ ಕೆದಱುವ ಸುರಹೊನ್ನೆಗಳುಂ, ಕೈವೊಯ್ದು ನಗುವಂತೆ ತಳಿ
ರ್ಗೊಂಬಂ ತಳಿರ್ಗೊಂಬು ತಾಗೆ ಪೂತು ತುಱುಗಿದ ಕಾಂಚಿವಾಳಂಗಳುಂ,
ಪೊನ್ನ ಪುಡಿಯುಂ ತಳಿವಂತೆ ಪರಾಗಮಂ ಸೂಸುವ ಸಂಪಗೆಗಳುಂ, ಪಣ್ಣ
ಪೆಣಿಗೆಯ ಬಿಣ್ಪು ತಿಣ್ಣಮಾದಂತೆ ಕೆಲದ ಕುಜಂಗಳೊಳೆಳದೋಳ್ಗಳನಿೞಿ

---

ಪಾ— 1 ಸೂೞೆಲೆಯುಂ ಖ|| 2 ಮುಗಳ್ದು...ವಾವುಗಳಿಂ. ಚ || 3 ಬೀಚಲಂ. ಖ||
4 ಗಳ್ಗೊ. ಖ|| 3 ಗಾಯ್ಗಳುಂ. ಖ|| 4 ಬಸುವ. ಖ||

ಪ್ರವ ಪೊಂಬಾಳೆಗಳುಂ, ಕೋಟೆ ವಾಟಿಸಿದ ಕಟ್ಟಿಲೆಯುಂ ಸುತ್ತಿ ಮುತ್ತಿದ ಬೆ
ಳ್ದಿಂಗಳ್ ಬೀಡುವಿಟ್ಟಂತೆ ಕಟ್ಟಿಲಿಸುವೆಳೆವಳ್ಳಿಯುಂ ಬಳಸಿ ಕಳಿಯೆ ಪೂತ
ಮಲ್ಲಿಗೆಗಳುಂ, ಮಲ್ಲಿಗೆಯ ಮುಗುಳ್ಗಳಂ ರಾಸಿಗೆಯ್ದಂತೆ ಪೂವನೊಟ್ಟೈದಿಪ್ಪೆಗ
ಳುಂ, ಇಪ್ಪೆಯ ಕಂಪಿಂಗೆ ಕುರುಳ್ದುಱ್ ಕರವುಂಡು ನೀರಂ ಕಾಱುವಂ
ತೆ ಸೂರಂ ಕಱೆವ ತಾಳ್ಗಳುಂ, ಕಿಸುಗಲ್ಲ ಪರಲ್ಗಳನುಗುಳ್ವಂತೆ ಬಿರಿದು[1]ಮು
ತ್ತಂ[1]ಬಿಡುವ ದಾಡಿಮಂಗಳುಂ, ಪೊಂಗೊಡಂಗಳಂ ಸಾರ್ಚಿದಂತೆ ಫಲಂಗಳಂ
ಮುಂದೆಗೊಂಡ ಮಾದುಫಲಂಗಳುಂ, ಕಾಯ್ತು ಕುಸಿವ ಕಾಂಗುಗಳುಂ, ಪ
ಣ್ತು ಬಳ್ಕುವ ನಾರಂಗಂಗಳುಂ, ತಳಿರ್ತುಱ್ ಬಗುವಶೋಕೆಗಳುಂ, ನನೆತೆಱಿ
ಲ್ವ ಜಾದಿಗಳುಂ, ಮುಗುಳ್ತು ಮುಱುವ ಮೊಲ್ಲೆಗಳುಂ, ಬಂಪು ಬಟೀಲ್ವ ಬಾ
ಳಚೂತಂಗಳುಂ, ತಳ್ತುಡರ್ವ ಲತೆಗಳುಂ, ಕೈವಿಟ್ಟ ಸಿರೆಗಳುಂ, ಸೋರ್ವ
ಸೋನೆಗಳುಂ, ಬಱೆಸುಗುವ ಪನಿಗಳುಂ, ಎಱಿಲ್ವ ಪೊಂಬಾಳೆಗಳುಂ, ಬೀ
ೞ್ವ ಬಾಳೆಗಳುಂ, ನೇಲ್ವ ಪಣ್ಪಾಳಂಗಳುಂ, ಅಲೆವ ಗೊನೆಗಳುಂ, ಮಱೆವ
ಗೊಂಚಲ್ಗಳುಂ, [2]ಅಲರ್ದು[2]ಗುವ ಲಗ್ಗಳುಂ, [3]ಅಲುಗುವ[3] ಸೆಳೆಗೊಂಬುಗ
ಳುಂ, ಕೋಳ್ವ ಬಂಡುಗಳುಂ, ಪನಿವ ತನಿರಸಂಗಳುಂ, ಏಱುವುಂಡವು
ನಗುಱ್ದು ನೋಡಿದೊಡಂ [4]ನೆಲೆದೋಱಿದ[4] ಕುಸುಮರಜಂಗಳುಂ, ತಾಳುದ್ದ
ಮಂ ತೋಡಿ ನೋಡಿದೊಡಂ ಮಧುರಸದಿಂ ನೀಗಾರ್ಣ್ಬ ಸೆಲನುಂ, ನಡೆವಡ
ಕೆಯ ಸಸಿಗಳುಂ, ತಡಿವಿಡಿದ ನವಿಲ್ಗಳುಂ, ಮರದಿಂ ಮರಕ್ಕೆ ಲಂಘಿಸುವ
ಕಪಿಗಣಂಗಳುಂ, ತಳಿರಿಂ ತಳಿರ್ಗೆ ತಳರ್ವ ಕೋಗಿಲೆಗಳುಂ, ಪೂವಿಂ ಪೂ
ವಿಂಗೆ ಪಾಯ್ವ ತುಂಬಿಗಳುಂ, ಪಣ್ಣಿಂ ಪಣ್ಗೆ ಪಾಱುವರಗಿಳಿಗಳುಂ, ಕೊಂ
ಬಿಂ ಕೊಂಬಿಂಗೆ ನಿಳ್ಕುವ ಪುರುಳಿಗಳುಮೆಸೆಯೆ, ಕಿಕ್ಕಿಱಿಗಿಱಿದೆಸೆವಲರ್ದು
ಱುಗಲಿಂ ತಳಿರ ಕೆಂಪುಮಲರ ಬೆಳ್ಪುಮಲ್ಲದೆ ಬಿಸಿಲುಂ ಬೆಳ್ದಿಂಗಳುಂ ಮು
ಟ್ಟದ ಬನದೊಳಗೆ ಬಪ್ಪರ್ಗಳ್; ॥೨೬॥

ತೀಡಿತ್ತೊಂದೊಂದಱಿಂ ತಣ್ಗಱಿಮುಱುಗಲ ತಾಮುಱ್ಟಿನೊಳ್ ಸಂದು
ಸಂದೋ । ಲಾಡುತ್ತುಂ ಕೂಡೆ ನೀರ್ವಕ್ಕಿಗಳುಲಿಪುಗಳಂ ಕರ್ಣದೊಳ್ತಂ

---

ಪಾ— 1 ಬಿತ್ತಂ. ಕ॥ 2 ಮರಲ್ದು. ಚ॥ 3 ಮಲಗುವ ಖ॥
4 ನೆಲನೇಱಿ ತೋಱುವ. ಚ॥

ಡು ತಂದೀ ॥ ಡಾಡುತ್ತುಂ ತೀರದೊಳ್ ತಳ್ತೆಳಲತೆಗಳ ಪೂಗೊಂಚಲಂ ನಿಂ
ದು ನಿಂದ । ಲ್ಲಾಡುತ್ತುಂ ನೀಲನೀರೇರುಹಸುರಭಿರಸಂ ಸಾರಸಂ ಮಾತ
ರಿಶ್ವಂ ॥ ॥೭೭॥

ವ॥ ಅಂತು ಕಂದರ್ಪದೇವಂಗಿದಿರ್ವರ್ಪಂತೆ ಬಂದ ಮಂದಾನಿಳಂ ತಳ
ಪ್ಪೆ ತಣ್ಣನೆ ತಣಿದು ರೂಪಕಂದರ್ಪದೇವಂ ಪೋಗೆವೋಗೆ; ॥೭೮॥

ವನಲಕ್ಷ್ಮೀದೇವಿಯುಂ ಪೆತ್ತಮೃತನಿಧಿಯೊ ವಿಂಧ್ಯಾದ್ರಿಚಂದ್ರೋಪ
ಳಂ ಚಂ । ದ್ರನ ಪೆರ್ಚಿರ್ದುರ್ಕಿದಂಭೋವಿಸರವೊ ವಿಪಿನಧ್ವಾಂತವಾಕ್ಷೇ
ಪದಿಂ ಕಾ ॥ ಪಿನೊಳಿಟ್ಟಿಂದುಪ್ರಭಾಪೂರವೊ ಹರಿ ಗರುಡೋದ್ಭೀತಿಯಿಂ
ಬಯ್ತ ಪೀಯೂ । ಷನಿಧಾನಶ್ರೀಯೊ ಪೇೞೆಂಬಿನಮಮಳತರಂ ರಯ್ಯ
ಮಾಯ್ತಬ್ಜಷಂಡಂ ॥ ॥೭೯॥

ಅದು ಶಂಖಶ್ರೇಣಿ ಮೇಣಲ್ಲದು ಕುಮುದಕುಳಂ ಪೊಕ್ಕ ಭೀತಾದ್ರಿ
ಮೇಣ । ಲ್ಲದು ಬಿಂಬವ್ಯಾಜದಿಂ ತೋರ್ಪ ಚಳಮೆಱಗುವಂಭೋಧರೋ
ನ್ಮಾಳೆ ಮೇಣ ॥ ಲ್ಲದು ತೀರೋದ್ವೃತ್ತಮಾಳಂ ಪವಳದ ಕಾಣೆ ಮೇಣಲ್ಲದ
ಬ್ಜಾತಕಿಂಜ । ಲ್ಕದ ಪುಂಜಂ ಬಿಂಜದೊಳ್ ಪರ್ಬುವ ಜಳನಿಧಿ ಮೇಣಲ್ಲ
ದಂಭೋಜಷಂಡಂ ॥ ॥೮೦॥

ತಿಂತ್ರಿಣಿಯಾಗಿ ತಾವರೆಯುಮುತ್ಪಲಮುಂ ಪೆಣೆದೊಂದನೊಂದು ನಾ ।
ಳಂ ತಡವಪ್ಪಿನಂ ತುಱುಗಿ ಪುಟ್ಟಿದುವೀಕೊಳದೊಳ್ ಪೊದಳ್ದುವ ॥
ರ್ಕಾಂತಲರ್ವ*ಂದಮೆಂದು ಪಗಲರ್ಕನಿರುಳ್ವಿಧುಬಿಂಬಮಿಂಬುಮಾ ।
ಳ್ಪಿಂತೆ ಮುಗುಳ್ಚುಗುಂ ಕುಮುದಕಾನನಮುಂ ಕಮಳಪ್ರತಾನಮುಂ ॥೮೧॥

ಕೂಪೊರ್ಗೆದದ್ರಿಕೂಟಮದನಳ್ಕಱಿಯುತ್ತಿರೆ ಪಲ್ಲವೋಗಿ ಮೈ ।
ದೋರ್ಪ ಕಳಂಕಮೆಂಬ ನೆವದಿಂದೆ ಸುಧಾಕರಬಿಂಬಮೊಕ್ಕು ಕೊಂ ॥
ಡಿರ್ಪಮದಿ*ಂದಮಾಯ್ತಿದು ಸರೋವರಮಲ್ಲದೊಡಿಂದುರಶ್ಮಿಗ ।
ಳ್ಗಿರ್ಪಣಮಿಲ್ಲದೇಕೆ ಜರೆ ತೋರ್ಪುದದೇಕೆ ಚಕೋರಚಕ್ರದೊಳ್ ॥೮೨॥

ಸ್ಮಿತನೀಲೋತ್ಪಲಪುಂಜದಿಂ ವಿಮಲತಾಸೌರಭ್ಯದಿಂ ದರ್ಪಣಾ ।
ಕೃತಿಯಿಂದೊಪ್ಪುವ ತತ್ಸರೋಜವನದೊಳ್ ಪೋ ಪುಟ್ಟಿದಂ ರೋಹಿಣೀ ॥
ಪತಿಯಂತಲ್ಲದೊಡಾಮದಾಳಿಕಳಭಶ್ಯಾಮಾಂಕಮಾಸ್ವಚ್ಛದೀ ।
ಧಿತಿಯಾನ್ಯತ್ತತೆ ಚಂದ್ರಮಂಗೆ ಪಿರಿದುಂ ಪೇೞೆತ್ತಣಿಂದಾದುದೋ ॥೮೩॥

ಬಾಳಾರ್ಕದ್ಯುತಿ ಪತ್ತು ಪಲ್ಲವಪಯಃಪಾನಕ್ಕೆ ಪುಗ್ಗಾಂಗೞ ।
ಜ್ವಾಳಾಲಗ್ನಸಟೋಪಪವಮಾನಶಬರೀಕ್ಷಾಮಾಂಗಕೋದ್ದಾಮಧೂ ॥
ಮಾಳಂಗಂ ನೆರವಾಗೆ ಕುಂದಿಮುದಿದರ್ಕಾಯುಷ್ಯಮೆಂಬಂತೆವೋಲ್ ।
ವ್ಯಾಳೀಭಾವಳಿ ಕೀಱ್ಬ್ಯಿದಾಕೊಳದೊಳಂಭೋಜಾತಜಾಳಂಗಳಂ ॥೮೪॥

ಆನಳಿನಾಕರದೊಳ್ ಕಾ ।
ಡಾನೆಗಳಿರೆ ನೀರನೂಡುತುಂ ತಡಿವಿಡಿದಂ ॥
[1]ದೇ[1]ನೆಸೆದುವೊ ನೆಲನಂ ಪೊ ।
ತ್ತಾನೆಗಳುಂ ನೀರನೂಡುವಂತೆ ನೆೞಲ್ಗಳ್ ॥ ॥೮೫॥

ಕರಿ ಮುೞುಗೆ ತತ್ಕರಾಗ್ರಪು ।
ನರವಿಂದಮೊಗೆತ್ತು ಸೆಳೆದು ಸೆಳೆಪಟ್ಟತಿಕಾ ॥
ತರ[2]ಕರಿ[2]ಕಳಭಮುಮುೞಿದಂ ।
ಬುರುಹಮುಮಂ ಮುಟ್ಟಲಣ್ಮದಾತಿಳಿಗೊಳದೊಳ್ ॥ ॥೮೬॥

ಅನ್ಯೃತಕರನಾತ್ಮಕರನಿಕ ।
ರಮುಮಂ ಪೊಱಗಿಟ್ಟು ತಂದು ಜಲದೊಳ್ ನೈರ್ಮ ॥
ಲ್ಯಮನೊಂದಿಸಲಿಕ್ಕಿದವೋ ।
ಲಮರ್ದು*ವು ಬಿಸಲತೆಯ ತುಱುಗಲಾತಿಳಿಗೊಳದೊಳ್ ॥ ॥೮೭॥

ಎಲರೆತ್ತಿಕೊಂಡವೋಲ್ ಶೀ ।
ತಲತೆಯನಿನಿಸಿನಿಸು ಬಿಸುಪ್ಪವೆರೆದುದು ಬಿಸಿಲೊಳ್ ॥
ಕಲಸಿದ ನೀರ್ ಕೊಳರ್ವ*ಕ್ಕಿಗ ।
ಳುಲಿದುವು ಪುಯ್ಯಲ್ಬವಂತಿರಾತಿಳಿಗೊಳದೊಳ್ ॥ ॥೮೮॥

ಪೊರ್ದಿದ ಮರದುಱುಗಲೆ ಮುಸು ।
ಱಿರ್ದಂತಳ್ಪಂದಮುಬ್ಬವನ[3]ಮುಮು[3]ನರ್ಕಂ ॥
ಪೀರ್ದಪನೆಂದದು ಮೊಯ್ಗರೆ ।
ದಿರ್ದಂತೆವೋಲಿರ್ದುಮಿಲ್ಲದಂತೆವೋಲೆಸೆಗುಂ ॥ ॥೮೯॥

---

ಪಾ— 1 ತೇ ಖ॥ 2 ಣದ, ಕ॥ ಜ॥ 3 ವನವು ಜ॥

ಬನವ ನೆೞಲ್ ಕರಮೆಸೆದುದು ।
ವನಲಕ್ಷ್ಮಿಯ ಮಜ್ಜನಕ್ಕೆ ಪೊಕ್ಕಂತಿರೆ ಪೂ ॥
ವಿನ ತುಱುಗ[1]ಲುದಿರ್ದ[1]ವಾಕೆಯ ।
ಕೊನೆಮುಡಿಯಿಂದುದಿರ್ದ ಪೂಗಳೆನೆ ಪೂಗೊಳದೊಳ್ ॥ ॥೯೦॥

ಕಿಂಜಲ್ಕದ ಕವಡುತ್ಪಲ ।
ಪುಂಜದ ಕೋೞ್ಕಿಂ[2]ಪಿನೊಳ್ಗೆಸರ್ ನವವಿಕಸ[2] ॥
ತ್ಕಂಜಮಧುವಿಂಪವೊಗೆದೊ[3]ಗೆ ।
ದೇಂ[3] ಜಲರುಹವನಮದಾಗಿಯುಂ ಸೊಗಯಿಸಿತೋ ॥ ॥೯೧॥

ವ॥ ಮತ್ತಮದು ಮೆಲ್ಲನಲೆವ ಮೆಲ್ಲೆಲರಂ ತೂಱಿ ತುಱುಗಿದ ತರಳತರಂಗಧವಳಚಾಮರಂಗಳಿಕ್ಕೆಲದೊಳೆಸೆಯೆ ತಣ್ಪಿಂಡ ಪುಂಡರೀಕದ ನೆೞಲೊಳ್ ವಿರಾಜಿಸುವ ರಾಜಹಂಸಂಗಳೊಳಂ, ಪಚ್ಚೆಯ ಬಟ್ಟಲೊಳ್ ಶಂಖದ ಮುರುಡಸಿಱಿಪಿದಂತೆ ತಾವರೆಯೆಲೆಯೊಳೆಮಿಡುಕದೆ ಕುಳ್ಳಿರ್ದ ತರುಣಮರಾಳಂಗಳೊಳಂ, ಜಲದೇವತೆಯುರೊಱಗಿ ಕೊಂಡ ಮಧುರಸದ ಪಸುರ್ಗಾಜಿನ ಬಟ್ಟಲ್ಗಳಂತೆ ಪೊಸತಲರ್ದ ಬಿಸರುಹದೆಸಳೆಡೆಯಿನೊಸರ್ದು ಪನಿತು ಮಗಮಗಿಸುವ ಮಧುರಸದಿಂ ತೆಕ್ಕನೆ ತೀವಿದ ಪಚ್ಚೆಲೆಗಳೊಳಂ, ಕಾಡಾನೆಗಳ್ ಕಿೞ್ತೀಡಾಡೆ ತೀರದೇಶದೊಳ್ ಬಿರ್ದಬಿಡೆ ನೊಂದು ಬಿಡುವ ಬಂಡಿನಿಂ ತೊಯ್ದು ತಾಯ್ದಾವರೆಗಳಂ ಬಿಡಲಾಱದಾಕ್ರಂದಿಸುವಂತೆ ನೆರೆದು ಬಂದು ಮೊಱೆದು ಮುಸುಱುವ ಮುಗ್ಧಮಧುಕರಂಗಳೊಳಂ, ನಡುನೀರೊಳ್ ತೇಂಕಾಡುವ ಕೇದಗೆಯೆಸಳ್ದೋಣಿಗಳಂ ದೋಣೆಯಿಟ್ಟೇಱುವಂತೆ ತೆರಳ್ದು ಕವಿದೆಱಗಿ ತೆರೆವೊಯ್ಲಿನಿಂ ತಡಿಗೆ ಸಾರ್ದ ತೊಂಡುಮುಂಬಿಗಳೊಳಂ ಬಮೊರ್ದಲೆ ನೆಗೆವ ನೀರ್ವಕ್ಕಿಗಳ ಗಱಿಗೊನೆಯಿನುಗುವ ತುಂತುರ್ವನಿಗಳಿಂ ತಂದಲ್ಮಸಗೆ ಮುಸುಱಿ ಮುಗುಳ್ದುಱುಗಲಂತೆ ಕಿಕ್ಕಿಱಿಗಿಱಿದು ಕಮಳವನದ ಕಂಪಿಂಗೆ ಕವಿವ ಕಾಡುದುಂಬಿಗಳೊಳಂ, ಎಲರಲೆಪದಿಂ ಸುರಿವ ಸರಸಿಜದ ರಜಂಬೊರೆದು ಪೊಂಬಣ್ಣಮಾದ ತೋರಬೆಱಗಳೊಳಂ, ಜಾಂಬೂನವಸರೋವರವಂತೆ ಮನೋಹರಮೆನಿಸಿದುದಂತುಮಲ್ಲದೆಯುಂ ॥೯೨॥

ಪಾ— 1 ಲಿರ್ದ. ಜ॥ 2 ಪಿನೇೞ್ಗೆ ಪರ್ಣವವಿಲಸ. ಜ॥ 3 ಗರೇಂ. ಚ॥

ಪ್ರಿಯತರವಾಯ್ತು ಕಣ್ಗೆ ವನಲಕ್ಷ್ಮಿಯ ಕನ್ನಡಿ ಕಂಜಬೀಜ್ಗೆ ಗಾ ।
ಳಿಯ ಗುಣದಾಗರಂ ನೆರೆದ ತುಂಬಿಯ ಜೀವಣಸಾಲೆ ಜಕ್ಕವ ॥
ಕ್ಕಿಯ ಸುರತಾಲಯಂ ಸಿರಿಯ ಸೆಜ್ಜೆ ದಿನೇಶನ ಪಿಂಡವಾಸವಂ ।
ಚೆಯ ಬೆಳಗೆಯ ಸುಧಾ[1]ಕರನ[1] ಸೋದರವಾವಿಳಸತ್ಸರೋವರಂ ॥೯೩॥
ಜಳಕೇಳೀದ್ರವದಿಂದೆ ಸಾಂದ್ರ ತೆಂಬಿದಿಂದೋಲಾಡಿ ಪೂಗೊಯ್ದು ಪ್ರಾ ।
ಗೊಳದಿಂದಂ ಪೊಜವಟ್ಟು ನಿಂದು ಶಬರೀಸಂದೋಹದಾವೋದಿಯು ॥
ಪ್ಪಳಕಾನೀಕದಿನೊಕ್ಕ ನೀರ್ವನಿಗಳಂ ತೀರಂ [2]ಸಮಂ[2]ಬಾಗೆ ಪೊ ।
ಯ್ದಳಿಜಾಳಂಗಳಿನಿಂದ್ರನೀಲಮಣಿಯಂ ಕಟ್ಟಿರ್ದವೋಲೊಪ್ಪುಗುಂ ॥೯೪॥
ಸಂತಸದ ಬಳವಿಯಂ ಕಾ ।
ಣ್ಬಂತೆ ಮನೋರಥದ ಸೀಮೆಗಾಣ್ಬಂತೆ ಮಹೀ ॥
ಕಾಂತಂ ಚೆಲ್ವಿನ ಕಡೆಗಾ ।
ಣ್ಬಂತಾಕುಮುದಾಕ್ಷಿಯೆಂಬ ಕೊಳನಂ ಕಂಡಂ ॥ ॥೯೫॥
ವ ॥ ಆಗಳ್ ಮಕರಂದನಿಂತೆಂದಂ:—
ಅಜ್ಜಿ ಕೊಳುತ್ತು ಮಿರ್ಪ ಕರಿಕುಂಭಮುಮಂಬುಜವಲ್ಲಿ ಮಾಲೆಗೊಂ ।
ಡಜ್ಜಿಳಿಯುಂ ತೆರಳ್ಚಿ ತೆರೆದೋಜುವ ಸೀಕರಮುಂ ವಿಳಾಸಮುಂ ॥
ಶಾಳ್ಜಿದುವೊಪ್ಪೆ ತೋರಮೊಲೆಗಳ್ ಜಲದೇವಿಕಟಾಕ್ಷ[3]ವೀಕ್ಷಣಂ[3] ।
ನೀಳ್ದರೆ ನೋಡುತುಂ ನಿನಗೆ ಮುತ್ತಿನ ಸೇಸೆಯನಿಕ್ಕುವಂದದಿಂ ॥೯೬॥
ಅದೆ ಕಳಹಂಸೆ ಸಾರ್ದಪುದು ಬಾಳಮೃಣಾಳಮಿದೆಂದು ತುಂಬಿ ಮಾ ।
ಣದೆ ಮುಸುಕುತ್ತು ಮಿರ್ದಪುದು ಪದ್ಮ ಮಿದೆಂದು ಪುಳಿಂದಿ ನಿಂದು ನೋ ॥
ಡಿವಸಳದಾವೆಯೆಂದು ಕೊಳದೊಳ್ ನಲಿದದ್ದಿ ಕೊಳುತ್ತು ಮಿರ್ಪ ಪೋ ।
ತದ ರದನಾಗ್ರಮಂ ಪೊಳೆವ ಪುಷ್ಕರಮಂ ನಸುದೋರ್ಪ ಕುಂಭಮಂ ॥
॥ ತ್ರಿ ಪ ದಿ ॥
‡ ನೆಯ್ದಿಲೆಂಪಜ್ಜಿಯೊಳಿ ಪಾಯ್ದು ತುಂಬಿಸೆಗೆತ್ತು ।
ಕಾಯ್ದು ನೀಗುರ್ಡಿವ ವನಚರಿ ಸುಪಕ್ಷ್ಮದಿಂ ।
ಪಾಯ್ದುಪ್ಪಳಲೆವ ಚಿಕುರಮಂ ॥ ॥೯೭॥

ಪಾ— 1 ರಸದ. ಚ॥ 2 ಸಡುಂ. ಚ॥ 2 ವಿಭ್ರಮಂ. ಚ॥

‡ ಜ॥ ಪ್ರತಿಯಲ್ಲಿ— ಸುಪ್ಪಿಸುಪ್ಪಿಸುಪ್ಪಾಲೆ— ಎಂದು ಇಲ್ಲಿದೆ.

ವ॥ ಎನೆ ಮನಮಿತ್ತು ಕೇಳುತ್ತುಂ

॥ ತ್ರಿ ಪ ದಿ ॥

ಎಯ್ದೆ ಪ್ರೇಪಿನನುಳಿಪೆಯ್ದೆದೆಂದಲರ್ಗಣ್ಣಿಂ ।
ದೆಯ್ದೆ ಪೀರ್ವಂತಿ ಬಗೆವರಸನ ನೋಟ ।
ಕ್ಕೆಯ್ದೆದಾಯ್ತೊಂದು ತಿಳಿಗೊಳಂ ॥ ॥೯೯॥

ರಾಗದೆ ರಭಸೋದ್ಧತಗವ ।
ರಾಗದೆ ನೃಪಸಚಿವಪುತ್ರರೀಕ್ಷಿಸುತದಱಿಂ ॥
ಪ್ರಾಗೊಳ[1]ಕಂ[1]ಬರವಾಣಿಯೆನೆ(?) ।
ಪೂಗೊಳನಂ ಪೊಗಲ್ವಿನಾವನೆನುತಂ ಪೊಕ್ಕರ್ ॥ ॥೧೦೦॥

ಪೊಕ್ಕಲರ್ವಡಿಯಂ ನೂಂಕಿ ಕೆ ।
ಲಕ್ಕೆ ಪರಿಕ್ಷಾಳಿತಾಂಘ್ರಿಮುಖಕರಕಮಳರ್ ॥
ಮುಕ್ಕುಳಿಸಿಯುಂಗುಟಿದ್ದ ನೀರಂ ।
ದಿಕ್ಕುಂಭಿಗಳೊಡುವಂತೆ ಮುದದಿಂ ಪೀರ್ದರ್ ॥ ॥೧೦೧॥

ವ॥ ಅಂತು ಪೀರ್ದು ಪಿಪಾಸಾನಲಂ ನಂದಿದಿಂಬಳಿಯುಮುದಱ ಮನೋಹರತೆಯನಾನಂದದಿಂ ನಿಂದು ನೋಲ್ಪ ಮಾನವಮದನಂಗೆ ಮದನತಾಪತೃಷ್ಣೆ ನೂರ್ಮಡಿಸೆ ಬಟಲ್ಕೆ ನಾಲ್ಮಡಿಸೆ ಬೇಗಮಲ್ಲಿಂ ಪೊಱಮಟ್ಟು ಮಲ್ಲಿಕಾವನದೊಳಗಣಿಂ ನಡೆದಾಕೊಳಕ್ಕನತಿದೂರದೇಶದೊಳ್ ಪುದಿದ ತರುಷಂಡಕ್ಕೆ ಮಂಡನಮೆನಿಸಿ ಮಾವನಪ್ಪಿ ನಿಪ್ಪಿಸತಪ್ಪ ಮಲ್ಲಿಕಾಮಂಡಪದೊಳ್ ಮಕರಂದನುಡಿದು ತಂದು ಪಾಸಿದ ಪೊಸದಳಿರ ಪಸೆಯೊಳ್ ಬಿಸುಸುಯ್ಯುತ್ತುಂ ವಿಶ್ವವಿದ್ಯಾವಿನೋದಂ ವಿಶ್ರಮಿಸಿರ್ಪುದುಮನ್ನೆಗಮಾತಂ ಸುಪಕ್ವಸರಸಾಮೋದಿಮೃದುಮಧುರಫಲಂಗಳನಾರಯ್ದುತಂದು ಅರಸಂ[2]ಗನುವಿಸಿ[2]ತಾನುಂ ಮೆಲ್ಲ ಮೆಲ್ಲನೆಳರೊಳರವಿಂದಮುಂ ಮುಂಡಾಡಿಸುವಂತೆ ಪತ್ರಿಯ ಪದತಳಂಗಳನಾತ್ಮಕರತಳಂಗಳಿಂದೊತ್ತುತುಮಿರ್ಪನ್ನೆಗಂ; ॥೧೦೨॥

ತೊಲಗೆ ಬಿಸಿಲ್ ನೆಬಿಲ್ಗೆ ತಲೆಯಂ ಮರಗೋಡೆಲೆ ಕೂಡೆ ಕುತ್ತಿ ಕ ।
ಟ್ಟಲೆ ಕವಿವಂದದಿಂ ಕವಿಯೆ ಕೂಡೆ ನೆಬಿಲ್ಗಳನಾಕರಂಗಳಿಂ ॥

---

ಪಾ— 1 ನಂ ಚ॥ 2 ಗೆನೊಲಲಿತ್ತು. ಖ।

ದೆಲರಡಿಯೆತ್ತಿ ಸುತ್ತುಡುಗಿವಂದ ಸರೋಜದ ಕೋಶದೇಶದಿಂ ।
ದಲಿ ಪೊಱಪಾಯೆ ಕಣ್ಗೊಳಿಸಿ ಬಂದುದು ಬೈಗಿನ ಪೊೞ್ತು ಬೇಗದಿಂ॥೧೦೩॥

ಅಡರೆ ನೆೞಲಳುರ್ವ* ಬಿಸಿಲುಂ ।
ಬೆಡಂಗುವಡೆಗತ್ತು ಗಡಣದಿಂ ತಿಮಿರದ ಮುಂ ॥
ಗುಡಿ ಕವಿತರೆ ಭಯದಿಂ ಬೆಂ ।
ಗುಡುವಂತಿರೆ ತಿಮಿರಹರಣನಿೞಿವವಸರದೊಳ್ ॥ ॥೧೦೪॥

ವ॥ ಮತ್ತಮಿನಿಸಱಿಂ

ಮುನಿಹಸ್ತಾಂಬುಜದಿಂದಮರ್ಘ್ಯಜಳಜಾಳಂ ಬೀೞೆ ನೀಳಾಬ್ಜಕಾ ।
ನನದೊಳ್ ಪಾಯ್ದಳಿ ಬೀೞೆ ಜಾರರೆರ್ದೆಯೊಳ್ ರತ್ಯುತ್ಸವಂ ಬೀೞೆ ಪ ॥
ದ್ಮಿನಿ ಬೆಂಬೀೞೆ ಬೞಲ್ದು ಬೀೞ್ವ ಹತಕೋಕಾನೀಕದುರ್ವೆೞ್ದು ಕ ।
ಣ್ಬನಿಗಳ್ ಭೋರೆನೆ ಬೀೞೆ ಬಿೞ್ದನಪರಾಂಭೋರಾಶಿಯೊಳ್ಭಾಸ್ಕರಂ ॥೧೦೫॥

ವ॥ ಆಗಳ್,

ದೂಸರಮಾದುದು ಗಗನಂ ।
ಮಾಸಿದುದಮರೇಂದ್ರದಿಙ್ಮುಖಂ ಮೃತಮಾದಾ ॥
ವಾಸರದ ದೆಸೆಗೆ 'ಚು'ರ್ಚಿದ ।
ಕೇಸುರಿಯೆನೆ ನೆಗೆದುದಪರಸಂಧ್ಯಾರಾಗಂ ॥ ॥೧೦೬॥

ವ॥ ಅಲ್ಲಿಂ ಬೞಿಯುಂ,

ಖರಕರನ ಸಹಸ್ರಕರೋ ।
ತ್ಕರದಾಂಕೆ ಕೞಲ್ದು ಕಿಡೆ ನಿರಾಲಂಬನಮಂ ॥
ಬರತಳಮೆ ನೆಲಕೆ ಬಿೞ್ದಂ ।
ತಿರೆ ಪಸರಿಸಿ ಮಬ್ಬುಮಬ್ಬಿ ಪಬ್ಬಿತ್ತಾಗಳ್ ॥ ॥೧೦೭॥

ಪ್ರಾಚೀಮುಖಮೃಗಮದಮು ।
ವೀರ್ಚಳದಳಕಂ ನಭಸ್ಸ್ಥಳೀನಿಳಯವಿಭೂ ॥
ಷೋಚಿತಮರೀಚಿ ಬರೆವರೆ ।
ಸೂಚೀನಿರ್ಭೇದ್ಯಮಾದುದಂದಿನ ತಿಮಿರಂ ॥ ॥೧೦೮॥

---

ಪಾ— 1. ಕ. ಕ॥ ಖ॥ ಚ॥

ವ॥ ಮತ್ತಮಿನಿಸಾನುಂ ಬೇಗದಿಂ

ಆರಯ್ಯದೆ ಖರಕರನೊಳ್ ।
ವಾರುಣಿ ವಸುವಿಭವಹೀನನೊಳ್ ನೆರೆಯೆ ದರ ॥
ಸ್ಮೇರಾನನೆಯಾದೈಂದ್ರೀ ।
ನಾರಿಯ ನಗೆಯಂತೆ ನೆಗೆದುವಿಂದುಕರಂಗಳ್ ॥ ॥೧೦೯॥

ವ॥ ಮತ್ತಮಿನಿಸಱಿಂ,

ನಿಜಕಿರಣಧಾತುನಿರ್ಝರ ।
ರಜೋನ್ವಿತಂ ನೀಲಲೋಹಿತಶ್ರೀನಿಳಯಂ ॥
ರಜನಿಕರರಜತಗಿರಿ[1]ನಿಜ[1] ।
ರಜವೊಗೆದುದು ಕಾಲವಶಮುಖೇಭೋತ್ಕ್ಷಿಪ್ತಂ ॥ ॥೧೧೦॥

ರವಿರುಚಿ ನೂಂಕೆ ಬಿಟ್ಟಪರವಾರ್ಧಿಯೊಳಾಟದೆ ಮೂಡಿ ಮೂಡಣಾ ।
ರ್ಣವತಟಪಲ್ಲಿ ತೇಂಕುತಿರೆ ತಾರಗೆಗಳ್ ಕವಿತಂದು [2]ತಟ್ಕೆ[2]ಗೊಂ ॥
ಡವಿರಳರಶ್ಮಿರಜ್ಜುಗಳೊಳಾಱಿಸೆ ಮತ್ತೆ ನಭಕ್ಕೆ ಸಂಧಿಗೊ ।
ಳ್ವವೊಲೆಗೆತಂದನುದ್ಗತವಿಕೀರ್ಣಕರಪ್ರಕರಂ ಸುಧಾಕರಂ ॥೧೧೧॥

ವ॥ ಅಂತು ವಿರಹಿಜನಕ್ಕೆ ವಿಳಯಾನಳನಂತಿರೊಗೆದ ಮೃಗಧರನುಯೂ ಖಮಾಲೆಯುಂ ಮದನಾಗ್ನಿಜ್ವಾಲೆಗೆತ್ತು ನೋಡಲಂಜಿ ಕಣ್ ಕೋರ್ಯಿಸಿದಂತೆ ಕಾಂತಾಚಿಂತಾಬ್ಧಿಮಗ್ನಚಿತ್ತನರಸಂ ನಿದ್ರಾ[3]ನಿಮೀಲಿತ[3]ನಯನನಪ್ಪದುಂ ಮಕರಂದಂ ನೆಲಕಿೞಿಪಿದ ಮಕರಂದವದಂತೆ ಕೆಲದ ಪಲ್ಲವಪ್ರಸರದೊಳ್ ಪಟ್ಟಿ ರ್ದುಮಾಗಳಾಬಾಳಚೂತ[4]ದ ಸೆಳ[4]ಗೊಂಬಿನ ತೊಳಪ ತಳಿರ ತೂಗುಂ ದೊಟ್ಟಿಲೊಳ್ ವಿನೋದವಶದಿಂ ವಸಿಯಿಸಿರ್ಪ ವಸಂತದೋದಳೆಯೆಂಬ ಶಾರಿಕೆ ನಿಜಚಿತ್ತಪ್ರಿಯನಪ್ಪ ಚೂತಪ್ರಿಯನೆಂಬ ಶುಕಂ ಪೋಗಿ ಪೋಗೆಯುಂ ಬಾರದಿರೆ, ॥೧೧೨॥

ಗಿಡುಗಂ ಕೊಂದುದೊ ಬೇಡರಿಟ್ಟ ಬಲೆಯೊಳ್ ಮೇಣ್ [5]ಬಿದ್ದನೋ[5] ಪಕ್ಷವೇ । ನುಡಿದತ್ತೋ ಪಿಡಿದನ್ಯಶಾರಿಕೆ ರತವ್ಯಾಪಾರ[6]ದೊಳ್[6] ಪೋಯ್ದು

---

ಪಾ— 1. ನೀ. ಕ॥ ಖ॥ 2 ತೆಕ್ಕೆ ಕ॥ ಜ॥ 3 ನಿಹಿತ ಖ॥
4 ದೆಳ. ಕ॥ ಖ॥ 5 ಬಿೞ್ದೋ. ಕ॥ 6 ದಿಂ. ಕ॥

ಳೊಃ ॥ ತಿಳಿವಂ ಪುತ್ರಿ ಪ್ರಿಯನೆಂದು ನೊಂದು ತಳರ್ಗೆಗಳ್ ನಾಂಬನ್ನೆಗಂ
ದುಃಖದಿಂ । ಗಡ ಕೀರಪ್ರಿಯಕಾಂತೆ ಸುಯ್ದು ಸುರಿವಳ್ ಘೋರೆಂದು ಬಾ
ಷ್ಪಾಂಬುವಂ ॥ ॥೧೧೩॥

ಗೂಡಿನ ಸುತ್ತಲುಂ ಸುೞಿಗುಮಾಲಿಸುಗುಂ ಸಲೆ ಬರ್ಪ ಬಟ್ಟೆಯಂ ।
ನೋಡುಗುಮುಬ್ಬಿಮೋಬ್ಬಿಮೊಳಗಂ ಪುಗುಗುಂ ತಳಿರೊಳ್ [1]ಪೊರಳ್ಗುಮಿ॥
ಪೊರ್[1]ಡಿವೆ ಬಿಟ್ಟ ಚಂಚು ಬಿಸುಸುಯ್ವೆಳಮಾವಿನ ಪಲ್ಲವಂಗಳಂ ।
ಬಾಡಿಸುಗುಂ ಮನಂಮಱುಗಿ ಶಾರಿಕೆ ಬಾರದೊಡಾತ್ಮವಲ್ಲಭಂ ॥೧೧೪॥

ವ॥ ಅಂತು ಮಮ್ಮಲ ಮಱುಗುತಿರ್ಪನ್ನೆಗಂ,

ಕೊರಲೊಳ್ ಕಲ್ಹಾರಮಿಂಬಾಗಿರೆ ಕುಸುಮರಜೋರಂಜಿತಂ ಚಂಚು
ಚೆಲ್ವಾ । ಗಿರೆ ಚಂಚತ್ಪಕ್ಷಜಾಳಂ ಮಳಯಜ[2]ರಸ[2]ದೊಳ್ ನಾಂದು [3]ಬೆಳ್ಪಿಂ[3]
ಬೆಡಂಗಾ॥ ಗಿರೆ ಬೇಗಂ ಕೊಂಡು ದಾಳಿಂಬದ ಪ್ರಸಗುಡುಕಂ ಶಾರಿಕಾಕಾಂ
ತೆಗಾಗಳ್ । ಪರಣಂ ಬರ್ಪಂತೆ ಬಂದತ್ತಪಗತಸಹಜಾಕಾರಮಾರಾಜಕೀರಂ॥

ಪಿರಿದುಂ[4]ಪಚ್ಚಲೆದೊಂ[4]ಗಲಂ ಪುಡುಕಿ ಸುಯ್ವುತ್ತಿರ್ಕುಂ ಬೋ ಮುಗ್ಧೆಮೈ।
ಗರೆದಾನಿದೆನೆಗೆತ್ತನಂಗಶಿಖಿಯಿಂ ಪಕ್ಷಾಳಿಗಳ್ ಪುತ್ತೆ ಸಿ ॥
ಕರಿವ್ರೋಗಿರ್ಕುವೊ ಗೂಡಿನಿನ್ನೆಲಕೆ ಮೋಣ್ಬೆಟ್ಟಿರ್ಕುಮೋ ಬಟ್ಟೆಯಂ ।
ಭರದಿಂ ನೋಡುತುಮಿರ್ಕುವೋಮಱುಗಿ ಮತ್ಪ್ರಾಣೇಶೆ ಮಿಕ್ಕಾಸೆಯಿಂ॥

ವ॥ ಎನುತುಂ ಬಂದಾಶುಕಂ ನೋಂಕಲೊಡನೆ,

ಶಾರಿಕೆ ಕನಲ್ದು ನೋಡಿ ಚ ।
ಕೋರಂ[5]ಗೆತ್ತೊದೆಮು[5] ಚಂಚುವಿಂ ನೊಂಕುವುದುಂ ॥
ಕೀರಂ ಕಾಲ್ವಿಡಿದೊಯ್ಕನೆ ।
[6]ಸಾರ ಸರಂದೋಱಿ ಚಲ್ಲವಾ[6]ಡಿತ್ತಾಗಳ್ ॥ ॥೧೧೭॥

---

ಪಾ— 1 ಪೊರಳ್ದನೀರ್ಗ್ವೋ. ಖ॥ ಜ॥ 2. ರಜ। ಖ॥ 3. ಬಿಳ್ಪಿಂ. ಜ॥
4. ಪಚ್ಚಲೊರ್ದಂ.. ಜ॥ ಖ। 5. ಗೆತ್ತಗಿದು ಕ॥
6. ಸಾರಸರಂದೋಱಿ......ಮಾ. ಜ॥ ಕ॥

ಅಱಿದು ಶುಕಪ್ರಿಯಕಾಮಿನಿ ।
ಗಱಿ ಗದಗದ ನಡುಗೆ [1]ಪಿಡಿಗೆ[1] ಪೊಣ್ಮಿದ ಮುನಿಸಿಂ ॥
ಪೆಱಗುಗುಡೆ ಕೀರಕಾಮುಕ ।
ನೆಱಗಿದನಿನಿಯಳ ಪದಕ್ಕೆ ಸಂಭ್ರಮದಿಂದಂ ॥ ॥ ೧೧೮ ॥

ವ॥ ಎಱಗಲೊಡನೆ,

ತನು [2]ತನಿಗೆತ್ತಿ[2]ಚಂಚು ಮಿಡುಕುತ್ತಿರೆ ಪ್ರೀತ್ತ್ಳ[3]ಗೊಂಬನುಳ್ಳುಗುರ್[3] ।
[4]ಸೊ[4]ನೆವಿಡೆ ತಾಗಿ ಸೂಗುರಿಸೆ ಕಂಠದ ತುಪ್ಪುೞಿಪಾಂಗಕಾಂತಿ ಕೆಂ ॥
ಪಿನ ಪಸರಕ್ಕೆ ಪಕ್ಕುಗುಡೆ ಪಕ್ಕದಿನೊತ್ತುತೆ ಮಿಱು ಪಾಯ್ವ ಕ ।
ಣ್ಬನಿಗಳ್ ನಾಗ[5]ಕೇಸರಿಗೆ ಸಾರಿಗೆ ಸಾರಿಗೆಯಾಯ್ತು ಕೋಪದಿಂ[5] ॥ ೧೧೯ ॥

ಪದಪಿನ್ನೇತರ್ಕೆ ಕಾಲ್ಗೊಂದಪ್ಪುದು ತೊಲಗಿದೇಂ ಬಲ್ಮೆಯೇ ಬಂದು ಸೌ
ಭಾ । ಗ್ಯದ ಕಂಪಂ ಬೀಱಲೇಕಾವೞಿಯುವೆ ಪೊಸತೇ ನಿನ್ನ ನಾಯಾಟವಿಂ
ಸೌ ॥ ಲ್ವ್ಯದು ಸೊಲ್ಗಂತಿರ್ದದಕ್ಕುಂ ಶುಕಸತಿ [6]ಪೞಿಗುಂ[6] ಪ್ರೇಗು ನಿನ್ನಾ
ಕೆ ಪೇೞ್ ನಿ । ನ್ನದು ತಪ್ಪೇಂ ಸೂರುಳುಂಟಾಂ ಮುಳಿದೊಡೆ ಬಿಡು ನೀಂ
ಬೇಡ ಮಿಥ್ಯಾ[7]ಪ್ರಮಾಣಂ[7] ॥ ॥ ೧೨೦ ॥

ವ॥ ಎಂದಿನ್ತು ಮೊದಲಾಗಿ ನೊಂದು ನುಡಿದ ಶಾರಿಕೆಯ ಈರ್ಷ್ಯಾಳಾಪಂ
ಗಳನರಸನಾಲಿಸಿ ಮಕರಂದನಂ ಮೆಲ್ಲನೆತ್ತಿ ಕಿವಿಯಿತ್ತು ಕೇಳುತ್ತುಮಿರ್ಪ್ಪ
ದುಂ ಶುಕನಿಂತೆಂದಂ:— ॥೧೨೧॥

ಕಾರಣ[8]ಮಿಂ[8]ಪೆಱತುಳ್ಳೊಡೆ ।
ಶಾರಿಕೆ ನಿನ್ನಾಣೆಯೆನ್ನ [9]ನಾಳ್ದ[9]ತಿಲಲಿತಾ ॥

---

ಪಾ— 1. ಪಿಡಿದು. ಖ॥; 2. ತನುಗಿತ್ತೆ. ಖ॥; ತನಗಿತ್ತ. ಜ॥
3. ಗೊಂಬಸೆಳ್ಳುಗುರ್. ಖ॥; ಗೊಂಬೆನಲ್ಕುಗುರ್ ಜ॥
4. ಗೊ. ಕ॥ ಖ॥ ಜ॥ 5. ಕೇಶಪಿಂಗೆಸಾರಿಕೆಯಾಯಿತು ಕೋಪದಿಂ
ಪಿನಿಂ. ಜ॥; ಕೇಸುರಿಗೆಸಾರಿಕೆಸಾರಿಕೆ...... ಖ॥ 6. ಘುಳಿಗುಂಕ॥
7. ಪ್ರಣಾಮಂ. ಕ॥ ಜ॥ 8 ವೇಂ. ಜ॥ 9 ನೊಲ್ಪ. ಖ॥

ಕಾರೆಗೆ ವಾಸವದತ್ತೆಗೆ ।
ಮಾರನಿನಲಿಲಾಗೆ ತಳರಲಱಿಯದೆ ತಡೆದೆಂ ॥ ॥೧೭೦॥

ಶಿಶಿರೋಪಚಾರಮಾದೊಡೆ ।
ಕುಶೇಶಯಾಶಯದೊಳಾಯ್ದು ಕೊಯ್ದುಂ ಕೊರಲೊಳ್ ॥
ಶಶಿಮುಖಿಯರ್ ಸುತ್ತಿದೊಡಾಂ ।
ವಿಶದಸರೋರುಹದ ಪೂವನಡ[1]ಕು[1]ತ್ತಿರ್ದೆಂ ॥ ॥೧೭೩॥

ತರುಣಿ ಪರಿಪರಿದು ಕುಸುಮಾ ।
ಕರಂಗಳಂ ತಿಱಿದು ಮುಱಿದು ತರುತಿರ್ದೆಂ ತ ॥
"ಣ್ಣೆರಲಱಿಸಿಲ್ಗಱಿಯಂ ನಾಂ"[2] ।
ಹರಿಚಂದನರಸದೊಳರ್ದಿ ಬೀಸುತ್ತಿರ್ದೆಂ ॥ ॥೧೭೪॥

ವ॥ ಎಂದು ಕಾಲ ಮೇಲೆ ಕವಿದು ಕೆಡೆದಂದದೊಳ್ ಕಡುಮುಳಿಸೆಂಬ ಕೆಸಱಿಂ ಮೆಲ್ನುಡಿಗಳೆಂಬ ತಿಳಿನೀರ್ಗಳಿಂ ತೊಳೆದು ಕಳೆದ ಕಾದಲನ ಪೆಡದಲೆಯ ತುಪ್ಪುಳಿಂ ವಸಂತದೋಹಳೆ ಚಂಚುಸ್ಫುಟದಿಂ ಪಿಡಿದು ನೆಗಪುವುದುಮನಂತರಂ, ॥೧೭೫॥

ಗಱಿಯೆಲ್ಲಂ ಪುಳಕಂಗಳಾಗೆ ಕಡುಪಿಂ ಪಾಯ್ದಪ್ಪಿ ನುಣ್ದುಪ್ಪುಳಿಂ ।
ಪೞಿದೀಡಾಡಿ ಬಹುಪ್ರಕಾರದಳಸಂ ತೋಱುತ್ತೆ ತುಂಡಾಗ್ರದಿಂ ॥
ದಿಱಿದೊಂದೊಂದಱ ಗಲ್ಲಮಂ ಪದಕೆ ಪತ್ತುತ್ತಿರ್ಪ ಬಾಯಿತ್ತು ಮೆಯ್ ।
ಮಱೆದೇಂ ಕಾಯ್ದು ಕಡಂಗಿ ಕೀರಮಿಥುನಂ ಕೂಡಿತ್ತೊ ಕಾದಲ್ಮೆಯಿಂ॥

ವ॥ ಅಂತು ಕೂಡಿದಿಂಬಱಿಯಮಾಕೊಳದ ಕುಮುದದ ಕೋಟ್ಕಿಂಪಿನೊಳಟ್ದು ತೋರದೆಱೆಯ ತುಱುಂಗಲೊಳ್ ತೆಱಂದಿಱಿದು ಪೋಱಮಟ್ಟು ತಳಾಱನಂತೆ ತೊಟಿಲ್ದು "ತಳಿರ"[3] ಬಿಜ್ಜಣಿಗೆಯೊಳ್ ತಂದ ತುಂತುರ್ವನಿಗಳಂ ತಳಿದು ಬೀಸುವೆಲರಿಂ ಸುರತಪರಿಶ್ರಮಂ ಪೋಗೆ ತದನಂತರಂ ವಸಂತದೋಹಳೆಯಿಂತೆಂದಳ್:— ॥೧೭೭॥

---

ಪಾ— 1 ರು. ಖ॥ 2. ಣ್ಣೆರಲಱಿಸಿ (ಸಲ್) ಗಱಿಯಂ ನಾಂ. ಜ॥ ಕ॥
3 ತಳಿನೀರ, ಖ॥

ವಾಸವದತ್ತೆಯಾರ ಮಗಳೀಂ ಕಡುಚೆಲ್ವೆಯೆ ಚಲ್ಲಕಾರ್ತಿಯೇ ।
ಲೇಸಱಿದಾಕೆ ಮೆಚ್ಚುವಳೆ ಮೆಚ್ಚಿದಳೀಗೆಳದಾವನಂ ಮನ ॥
ಕ್ಕಾಸಱನಂಗಪಾತಕನಿನಾಯ್ತು ಗಡಾವರದಿಂ ವಿದಗ್ಧವಾ ।
ಣೀಸಖಿ ಕೇಳಲಬ್ಬೆ ಯೆನಗಾದುದು ಸಲ್ಲನೆ ಪೇೞುದೆಲ್ಲಮಂ ॥೧೨೮॥

ವ॥ ಎಂದಾಮಹಾ[1]ಭ್ಯಾಗತನ ಭಾಗ್ಯ[1]ದೇವತೆಯಂತಾಗ್ರಹಮಂ ಬಿಸುಡದೆ ಬೆಸಗೊಂಡ ತನ್ನ ಮನಃಪ್ರಿಯೆಗೆ ಚೂತಪ್ರಿಯನೆಂಬ ಚತುರಶುಕಂ ಪೇೞಲ್ ತೊಡಗಿತ್ತದೆಂತೆನೆ:— ॥೧೨೯॥

ಕುಸುಮಾಕರದಾಕರಮೆನೆ ।
ಕುಸುಮಾಯುಧನೆಂದುಮಿರ್ಪ ನೆಲೆಯೆನೆ ಜಗದೊಳ್ ॥
ಕುಸುಮನುಕುಮಾರಿಯರ ಸಾ ।
ಧ್ಯಸವನಮೆನೆ ಮಿಸುಪುದಸವಳಂ ಕುಸುಮಪುರಂ ॥ ॥೧೩೦॥

ಅದು ನಿಚ್ಚಂ ಮ್ಮೈನೆಯಿಂ ನಚ್ಚರಿಸಿ ಮಣಿಮಹೀಪಾವದಿಂದಿಕ್ಕಿ ಮೆಟ್ಟಿ । ದುರ್ದು ತಾನೆಂಬಂದದಿಂ ಭೋಗವತಿಯೆಸಕಮಂ ನೀಳಗೇಹಪ್ರಭಾ ಪುಂ। ಜದ [2]ಪರ್ವಿಂ ಕೊ[2]ಯ್ದುದೆಂಬಂತಳಕೆಯಳಕಮಂ ಸೌಧಕೇತೂರ್ಧ್ವಹಸ್ತಾ । ಗ್ರದಿನಾಕಾಶಕ್ಕೆ [3]ಕೆತ್ತಿ[3]ತ್ತಿದುದಮರಪುರಶ್ರೀಯನೆಂಬಂತೆ ತೋರ್ಕುಂ ॥ ॥೧೩೧॥

ಸಿರಿಯಿಂ ಸೌಖ್ಯಂಗಳಿಂದುರ್ಕುವ ಸುರಪುರಮಂ ಲೀಲೆಯಿಂ ಗೆಲ್ದು ಮಿಕ್ಕಾ। ಪುರರಾಜಂ ಬೀರಮಂಪಾಡಿಸುವವ್ಹೊಲೆಸೆಗುಂ ರಮ್ಯಗಾಣಿಕ್ಯಗೇಹಾಂ॥ ತರದೊಳ್ ಸಂಗೀತನಾದಂ ಪ್ರಮದವನದೊಳುದ್ಭ್ರಂಗನಾದಂ ಗೃಹಾಬ್ಜಾ। ಕರದೊಳ್ ಭೃಂಗೀನಿನಾದಂ ನೃಪತಿನಿಲಯದೊಳ್ ವಲ್ಲಕೀಸ್ನಿಗ್ಧನಾದಂ ॥

ಯುವಭೃಂಗೋನ್ಮದಕಾರಿ ಕೈರವವನಂ ಲಕ್ಷ್ಮೀ[4]ಮನೋರಂಜಿ[4] ತ್ಕಂ । ಬುವನಂ ಕುಟ್ಮಳಕಂಪಿ ಚಂಪಕವನಂ ಸ್ನಿಗ್ಧದ್ರುವಶ್ಯೋಬ್ಬೀತಿ ಚೂ ॥

---

ಪಾ— 1 ಭೋಗನ ಜಾಗದ. ಜ॥ 2. ಪರ್ವಂ ಪೊ. ಜ॥ 3 ಕೇಳ. ಚ॥
4 ವಶೋಕುಂಜಿ. ಖ॥

ತವನಂ ಗಂಧನಿಕೇತಕೇತಕಿವನಂ ಮಲ್ಲೀಲತಾಶಾಲಿ ಶಾ |
ಲಿವನಂ ತಣ್ಪುಱವೊಪ್ಪೆ ತನ್ನಗರಮಾಯ್ತುರ್ವೀವಧೂಯೌವನಂ ||೧೩೩||

ಸುರಯಿಯ ಸೋನೆ ಸಂಪಗೆಯ ಸೂಸ್ವೆಱೆ ಮಲ್ಲಿಗೆವೂವಿನಚ್ಚ ಬೆ |
ಳ್ಸರಿ ಸುರಹೊನ್ನೆಯೊಂದೆವನಿ ಮೊಲ್ಲೆಯ ಬಳ್ಳಿಗುಳಾಲಿ ಕೊಳ್ವ ಪಾ ||
ದರಿ[1]ಯರೆವೀಱು[1] ಕೇಸರದ ತಂವಲಗುಂವಲೆಯಾಗೆ ಸುತ್ತಲುಂ |
ಸರಿಯೆ ಸಡಿಲ್ಚಿ ಬೀಸುವುದು ತೆಂಕಣ ಗಾಳಿ[2]ವನಾಭ್ರಲೇಖೆಯಂ[2] ||೧೩೪||

ಸುರಯಿಯ ಕೇಸರಂಬೊರೆದು ಕಾಂಚನಕಂಜಪರಾಗಪುಂಜದೊಳ್ |
ಬೆರಸಿ ತೆರಳ್ಚಿ ಸಂಪಗೆಯ ಪೂವುಡಿಯಂ ಪೊಸಪೊನ್ನಬಣ್ಣಮಾ ||
ಗಿರೆ ಪರಿವಲ್ಲಿ ಕಲ್ಲ ಮರಪಬ್ಬೆಯ ಬಣ್ಣವನೆತ್ತಿ ಸುತ್ತಿಸಿ |
ದ್ಧರಸದ ಪೂರವಂತೆ ಪರಿಗುಂ ಪರಿಕಾಲ್ವೊನಲೆಲ್ಲಿ ನೋೞ್ಪೊಡಂ ||೧೩೫||

ತುಱುಗಿರೆ ಪೊತ್ತು ಬಂದು ನನೆಯಂ ಬೆಮರ್ವಂತೆ ಬೞಲ್ದು ತುಂತುಱಿಂ |
ಕಱಿವೆಳಮಾವುಗಳ್ ಫಲಭರಕ್ಕೆ ಬೞಲ್ದಪುವೆಂಬಿನಂ ನೆಲ ||
ಕ್ಕೊಱಗಿದ ತೆಂಗುಗಳ್ ಬಿರಯಿಯೆಂಬೆಣೆವಕ್ಕಿಗಳಂ ನಿರಂತರಂ |
ಮಱುಗಿಸುವಂತು ಕಟ್ಟಲೆಯನೀವೆಲೆವಳ್ಳಿಗಳಿತ್ತ ನೋೞ್ಪೊಡಂ ||೧೩೬||

ಬಿರಯಿಯ ಪಾಪದೃಷ್ಟಿಗಳೆ ತಾಗಿದುವೆಂದಗಿದಂತೆ ಚೂತವ |
ಲ್ಲರಿ ಸೊನೆಯಿಂದೆ ತೂಪಿಱಿದು ಪೊಯ್ದುಳಯಿಂ ಸೊಡರ್ವಕ್ಕನಿಟ್ಟುಮೆ ||
ಯ್ದಿರದೆಳಗೊಂಬುದೋಳ್ ತಳಿರ್ದೀವಿಗೆಯಿಂದೆ ನಿವಾಳಿಸುತ್ತದೇಂ |
ಪೊರೆವುದೊ ಸೋರ್ವ ಪಣ್ಣ ರಸದಿಂ ಸಹಕಾರಕುಮಾರಕರ್ಕಳಂ ||೧೩೭||

ಅವಧರಿಸಂಗಜನ್ಮ ತನಿಗಬ್ಬಿನ ಸೋರ್ವ ರಸಪ್ರವಾಹದಿಂ |
ದವೆ ನನೆವೊಯ್ದು ಕಾಯ್ತುಱುಗಿ ಪಣ್ತುದು ಮಾಮರನೆಂದು ಬಂದು ಬಿ ||
ನ್ನವಿಸೆ ವಸಂತಕಂ ಪದೆದು ಬಾಸ್ಪುಪಕಾರಿಯೆನುತ್ತೆ ಚಿತ್ತಸಂ |
ಭವನಲರ್ವಿಲ್ಲನಂತಿರಿಸಿ ಕಬ್ಬಿನ ಬಿಲ್ವಿಡಿವಂ ಬನಂಗಳೊಳ್ ||೧೩೮||

ಪಾ— 1 ಯರಲೇಱು. ಕ|| ಜ|| 2 ನವಾಮ್ರಲೇಖೆಯಿಂ

|| ಲಲಿತರಗಳೆ ||

ಅಲ್ಲಿ ಲತೆವನೆಯಲ್ಲಿ ಮಲ್ಲಿಕಾವನದಲ್ಲಿ ।
ತಳಿರ ಕಾವಣದಲ್ಲಿ ಕುಳಿ*ರ್ವ ತಿಳಿಗೊಳದಲ್ಲಿ ।
ಸಂಪಗೆಯ ಜೊಂಪದೊಳ್ ಕಂಪಿಸುವ ಜಂಪದೊಳ್ ।
ನನೆಗೊಂಚಲಂ [1]ಮುಡಿದು ವನದಲರ್*ಗಳಂ ತುಡಿದು[1] ।
ಮಧುವಿಂಗೆ ಬೊಟ್ಟಿಟ್ಟು ಮಧುರತೆಗೆ ಮುಂಬಿಟ್ಟು ।
ತನಿಗಂಪನಣ್ಪಿಕ್ಕಿ [2]ವನಜದರಲಂ ಸೆಕ್ಕಿ[2] ॥
ಕುಸುಮರಜಮಂ ತಳೆದು ಮುಸುರ್ವ* ತುಂಬಿಗೆ ಮುಳಿದು ।
ಕೆಂದಳಿರ್ಗೆ ಕಣ್ಣಿಟ್ಟು ಕರ್ಣಪೂರಮನಿಟ್ಟು ।
ಕುಂದಕುಟ್ಮಳಮೌಕ್ತಿಕಾಭರಣಮಂ ತೊಟ್ಟು ।
ಮಾಮಿಡಿಗಳಂ ತೆಗೆದು ಪಚ್ಚೆಸಾರಮನಿಕ್ಕಿ ।
ಪೂಮುಡಿಗಳೊಳ್ ತಳಿರ ಲಂಬಣಮನೆಲಲಿಕ್ಕಿ ।
ತೋರಮಲ್ಲಿಗೆಮುಗುಳ ಮೂಕುತಿಯನೊಸೆದಿಕ್ಕಿ ।
ಹಾರಮಂ ಸುರಯಿಯುರಲಿಂ ಸಮೆದು ಮುಡಿದಿಕ್ಕಿ ।
ಸಿರಿಸದಲರ್*ಸರಮನಲೆವ ಕುರುಳೊಳ್ಸೂಸಿ ।
ಸುರಿವ ಮಕರಂದಮಂ ಮುದ್ದುಮೊಗದೊಳ್ಪೂಸಿ ।
ಕೇದಗೆಯ ಕರ್ಣಪತ್ರಂ ಪೊಳೆಯೆ ಪಾಳಿಯೊಳ್ ।
ಪಾದರಿಯ ಪಿಂಡುಗಂಕಣಮುಮರೆ ಲೀಲೆಯೊಳ್ ।
ಬಗೆಗೊಳಿಸೆ ಸಂಪಗೆಯ ನೂಪುರಂ ಚರಣಮಂ ।
ನಗುವಂತೆ ನನೆದೊಡವು ಮುತ್ತಿನಾಭರಣಮಂ ।
ನಸು ಬಿರಿದ ಬಾಯ ಕಂಪಿಂ ಬೆರಸಿದೆಲರಿಂದೆ ।
ಪಸದನಂಗೊಂಡೆಸೆಯೆ ವನಮೆಚ್ಚಿದಲರಿಂದೆ ।
ಕೈಯ ಕೆಂಪಂ ತಳಿರ್ಗೆ* ಮೆಯ್ಯ ಪಸುರಂ ಬಿದಿರ್ಗೆ* ।
ಲಪನಗಂಧಮನಳಿಗೆ ಚಪಳತೆಯನರಗಿಳಿಗೆ ।
ಸೋಗೆಗಾಟಮನಿತ್ತು ಕೋಗಿಲೆಗೆ ಸರವಿತ್ತು ।

ಪಾ— 1 ಮುಡಿದು ವನಜದರಲಂ ಪಿಡಿದು. ಖ॥ 2 ಕೊನೆಮುಡಿಗಳಂ ಪಿಕ್ಕಿ. ಜ॥

ರತಿಯ ಸೊಬಗಂ ಗೆಲ್ದು ಲತೆಯನಂದದೆ [1]ನೀಲ್ದು[1]।
[2]ಕಾಣ್ಬ[2] ಜಸಮೆನೆ ಮಿಸುಗೆ ಕಣ್ಬೆಳಗು ದೆಸೆದೆಸೆಗೆ ।
ನಗೆಮೊಗದ ಮಿಗೆ ನೆಗೆದ ನೆಲೆಮೊಲೆಯ [3]ಕಿಱು[3]ನೆಲೆಯ ।
[4]ಪೆಱೆನೊಸಲ ಪವಗೊರಲ ನಸುನಗೆಯ ಪ್ರಸಗೆಯ ।
ಗುರುಕಟಿಯ ಸವಿಮಟಿಯ ಬಿಡುಮುಡಿಯ ಪ್ರಾಳಿಪಡಿಯ ।
ಸುಳಿಗುರುಳ ನಳಿತೋಳ ಚಳತರಳಲೋಚನದ ।
ಮೃಗಮದದ ಮಗಮಗಿಪ ನಸುಸುಯ್ಯ ಮೆಲ್ಮೆಯ್ಯ ।
ಛವಿಮಗುಳ್ವ ಪದಪುಗುಳ್ವ ನುಣ್ಬೊಗರ ಸೆಳ್ಳುಗುರ ।
ಕಳರವದ ಸಲೆತವದ ಮುದವೊಸೆವ ಮದಮೆಸೆವ ।[4]
ನಡುನಳಿವ ನಡೆಸೆಳೆವ ಕುಱುನುಡಿಯ ಕಣ್ಗೆಡೆಯ ।
ನಳಿತೋಳ ಕಡುಮೋಳಮಾವಳಿಪ ಸಂಚಳಿಪ ।
ಪುರವರದ ಕಾಂತೆಯರ್ ತರಳಾಳಕಾಂತೆಯರ್ ।
ಲಲಿತಸುಖಮೂರ್ತಿಯರ್ ಪ್ರಸದೇಸೆಕಾರ್ತಿಯರ್ ।
ಸೊಬಗಿನಿಂ ಮದನಂಗೆ ಪೂಜೆಯಂ ಮಾಡುವರ್ ।
ವಿಬುಧವಿದ್ಯಾಧರನ ಗೀತಮಂ ಪಾಡುವರ್ ॥ ॥೧೩೯॥

ವ॥ ಅಂತು ಮಧುಕರಪಕ್ಷಪಾತದರದಳಿತಮಧುರಮಾಧವೀಮಂಜರಿಯಿಂ ದಿವಿಜೋದ್ಯಾನಮಂ ನಸುನಗುವಂತಿರ್ದ ರಮ್ಯೋದ್ಯಾನದೊಳಗೆ॥

[5]ಎಱಗುವ[5] ಕೈಗರಗಂಗಳೊ ।
[6]ಳೆಱೆಯುತ್ತೆ[6]ಳನೀರ್ಗಳಂ ಕುಚಾಳಿಗೆ ಜಗಮಂ ॥
ಮಱುಗಿಸಿ ಮನೋಜನಱಿಕೆ ।
ಟ್ಟಿಱುವಟ್ಟಿಗೆವಾರ್ವರಂತೆ ತೆಂಗಿನ ಮರಗಳ್ ॥ ॥೧೪೦॥

---

ಪಾ— 1. ಪೋಲ್ದು. ಜ॥ 2 ಕಣ್ಗೆ. ಜ॥ 3 ಬಲು. ಕ॥
4. ಪೆಱನೊಸಲ ನೆಱೆಪಸಲಪದಗೊರಲ ಮೃದುವೆರಲ . ... ಮಗಮಗಿಪ ನಳನಳಿಪ ನಸುಸುಸುಯ್ಯ . .. ಮೆಲ-ಪದದಕಳರವದ...ಜ॥;.. ... ನಳನಳಿಪಮೆಲುಮಯ್ಯಛವಿಯುಗುಳ್ದ ಕದಪುಗಳ ಪಡಪುಗುಳ್ವ ನುಣ್ಬೊಗರ......ಕ॥;.....ಮೆಲ್ಮೆಯ್ಯತನ್ನಯುಸವಿಮಗುಳ್ವ .. ಖ॥
5. ಎಱವುವ. ಜ॥ 6. ಳೆಱಗು. ಕ॥ ಚ॥ ಜ॥

ತೊಳಗುವ ವನಲಕ್ಷ್ಮಿಯ ಪೆಂ ।
ಗಳ ಮಂಗಳಕಳಶಮೆನಿಪ ರಸಮಾದುಫಲಂ ॥
ಗಳ ಮುಗಮುಗಿಸುವ ಕಂಪಿಂ ।
ಗೆಳಮಾವಿನ ಬಾಯ್ಗಳೊಱೆ[1]ತವೊಲ್ ಸೋನೆ ಸುರಿಗುಂ[1] ॥ ॥೧೪೨॥

ಬಳೆಯೆ ರಸವೊಳಗೆ ಪೇನ್ನಾ ।
ಯ್ತೆಳವಕ್ಕಿಯೆನಲ್ಕೆ ಕೊರ್ಬಿ ಪೊಳೆವಮರ್ದನ ಪೆಂ ॥
ಗಳಸಂಗಳಂತೆ ತೊಳತೊಳ ।
ತೊಳಗಿಪುವತಿಮಧುರಮಾದುಫಲದ ಫಲಂಗಳ್ ॥ ॥೧೪೩॥

ನೀಂ ಬಯಸಿ ಬೇಡೆ ಪವಳಂ ।
ಕೆಂಬರಲಂ ಕಾಱುವಂತಿರಾಂ ಬಾಯ್ಬಾಯೊಳ್ ॥
ಚುಂಬಿಸುತಿ[2]ರ್ಕುರ್ಂ ರಸ[2]ದಾ ।
ಳಂಬದ ಬಿಬ್ಬಿಗಳಿವಲ್ಲಿಯವು ತರಳಾಕ್ಷೀ ॥ ॥೧೪೪॥

ಎನಿತಲರ್ಗಳನಿತೆ ಫಲಮುಂ ।
ಜನಿಯಿಸುವೊಡೆ ಪೊಱಗೆ ಬಱಿವೆ ಪೂವಿನ ಪೇಱೆಯೇ ॥
ಕೆನುತನ್ಯಕುವಮನಳಿರದ ।
ದೆ ನಗುವವೊಲ್ ಪಣ್ತು ಬಕ್ಕೆವಲಸುಗಳೆಸೆಗುಂ ॥ ॥೧೪೫॥

ಪೇಱೆ[3]ಬಱಿಲ್ದಿರ್ಪಿರವಿಂ[3] ।
ಪೇೞಿದ ಪಣ್ಗೊನೆಯುನಿಱಿಪಲೊಡನೆ ನಿಮಿತ್ತಂ ॥
ಬೇಱುಂಟೆ ಫಲಕೆ ಮ್ಯೈವರ ।
ಲಾಱದ ಕಡುಸೋಂಬತನಕೆ ಪೊಂಬಾಱೆಗಳೊಳ್ ॥ ॥೧೪೬॥

॥ರಥೋದ್ಧತೆ॥

ಆಳವಾಳಜಳಬಿಂಬಿತಂಗಳಿಂ ।
ಬಾಱೆ [4]ಬೀೞ್ತೊ[4]ನೆಗಳಿಂ ವಿರಾಜಿಕುಂ ॥

ಪಾ — 1 ವಪೋಲ್ಸೊಗಯಿಸುಗುಂ. ಜ॥ 2 ಕುರ್ಮರಸ ಕ॥ ಚ॥
3 ಬಱಿಲ್ಗಳಿಂಡಿದೇಂ ಜ॥; ಬಱಿಲ್ದಪೊರ್ಳಿವಿಂ. ಚ॥
4 ಬಿಣ್ಗೊನೆ. ಕ॥; ಬಿಣ್ಗೊಡೆ ಚ॥

ಲೀಳೆಯಿಂ ಪನಸಜಾತಮತ್ಸಖಿಂ ।
ಕೇಳ[1] ಬೇವಿನಿಡಿವು ಪಣ್ತುದೆಂಬಿನಿಂ ॥ ॥೧೪೭॥
ಬೀಗಿ ಬಿಗಿಯುಪ್ಪಿ ರತಿಯುಂ ।
ರಾಗದಿನಾಬನದೊಳನುಬಲಮುಱಿವು ಕರಂ ॥
ಬಾಗಿಟ್ಟ ಬಿಲ್ಗಳೆನೆ ನಸು ।
ಬಾಗಿರ್ದುವು ರಸದ ಭರದಿನಸಿತೇಕ್ಷುವನಂ ॥ ॥೧೪೮॥
ಪಿರಿದಾಗಿ ಪತ್ತೆ ಕೆಂಪಳ ।
ದರಿಸಿನವಿರಿಸಿವಳೊ "ಪರಿದು" ಪ್ರೊದೆಯಂ ರತಿ ತ ॥
ನ್ನರಸನಲಗುಗಳನೆಂಬಂ ।
ತಿರೆ ಮುಗಮುಗಿಸುವುವು ಪ್ರೊಂಗಿ ಪ್ರೆಂಗೇದಗೆಗ್ಳ ॥ ॥೧೪೯॥
ಎಲೆವಳ್ಳಿ ಪುಸುರ್ಪಿಂ ಕ ।
ಬ್ಬಲಿಸುವುದೇಂ ಪಿರಿದೆ ಬನದೊಳಾಪುರ್ದೊಳ್ ಬೆ ॥
ಳ್ಳಲೆ ಮೆಲ್ವರ ಬಾಯುಂ ಕ ।
ಬ್ಬಲಿಸುವುದೆನೆ ಪ್ರೊಳೆವ ಪಲ್ಲ ಕಡುಗರ್ಪಿಂವಂ ॥ ॥೧೫೦॥
ಅಳಿದಳಿತಕಮುಳಪ್ಪುದುಕು ।
ಟ್ಮಳಮಧುಮುದಕೀರಕಳಭಖಂಡಿತಫಳಕೋ ॥
ಕಿಳಕಬಳಿತಕಳಿಕಾರಸ ।
ಕಳುಷಿತಶತಪತ್ರಷಂಡಮಂಡಿತಮಹಿವಂ ॥ ॥೧೫೧॥
ಮದಮಧುಪವಿರುತಿಗೀತಂ ।
ಮದಕೋಕಿಲನಿನದವಾದಿತಂ ಮದಶಿಖಿಸಂ ॥
ಮದಲಲಿತಲಾಸ್ಯಮೆಸೆದುದು ।
ಮದನನ ಸಂಗೀತಭವನವೆನೆ ಪ್ರರದ ವನಂ ॥ ॥೧೫೨॥
ಗಿಳಿಯು ಮದಶಿಖಿಯು ಕೊಂಚೆಯು ।
ಕೊಳರ್ವಕ್ಕಿಯು ಕುಕಿಲ್ವ ಬಕದ ಕಳಹಂಸೆಯು ತ ॥

ಪಾ— 1. ಮತ್ಸಖಿಂ ಕೀಱ್. ಕ॥; ಮುತ್ಸಕಂ ಕೇಳೆ ಚ॥
2. ಪಿರಿದು ಕ॥ ಚ॥ 3 ದಾ. ಚ॥

ಳ್ತುಳಿಯ ಪರಭೃತವ ಪ್ರರುಳಿಯ ।
ಕಳಕಳಮಂಗಜನ ಬಳವ ಕಳಕಳಮೆನಿಕುಂ ॥ ॥೧೫೩॥

ವ॥ ಆಬನಕ್ಕೆ ಪ್ರೋಪ ಬಪ ಬಟ್ಟೆಯೊಳ್,

ಪ್ರಲಕಂ ಕೈಮಿಗೆ ಮಾಣ್ಗುಮೆಂಬ ಬಗೆಯಿಂ ರೂಪಂ ಕರಂ ಮೆಚ್ಚಿಯುಂ । ತಳೆಯಂ [1]ತೂಗದೆ ಪಾಂಥರೀಂಟೆ ವಿಕಸತ್ತೃಷ್ಣಾತುರರ್ ಚಿತ್ತ[1]ಭೂ ॥ ತಲದೊಳ್ ನಾಂಟಿದ ಬೇಂಟಮೆಂಬಗೆಗೆ ನೀರ್ವೊಯ್ವಂತೆ ಭೃಂಗಾರಶೀ । ತಲತೋಯಂಗಳನಾಂತು ಪಾಣಿತಳದೊಳ್ ಪ್ರೊಯ್ವರ್ ಪ್ರಪಾಕಾಂತೆಯರ್ ॥ ॥೧೫೪॥

ವ॥ ಮತ್ತಮಾ[2]ಬನಮಂ[2] ಬಳಸಿ ಬೆಳೆದು

ಅರಗಿಳಿವಿಂಡು ಪಚ್ಚೆಲೆಯ ಪಂದರಪ್ರೋಲೊಗೆದೊಪ್ಪೆ ತಟ್ಟಿಯುಂ ।
ತಿರೆ ತನಿಗರ್ಬುಗಳ್ ರತಿಯ ಕಾಮನ ರಮ್ಯವಿವಾಹಗೇಹದೊಳ್ ॥
ವಿರಚಿಸಿ ಪಚ್ಚೆಯೊಳ್ಗಲಿಯುಂ ಮಧುಶೋಭೆಗೆ ಪ್ರನ್ನ ನೀಗಳಂ ।
[3]ಧ[3]ರಿಯಿಸಿದಂತೆ ಕೆಂಪ್ರುವಡೆದೇಂ ಪಸು[4]ಗೊಂಡಪ್ರೊ[4]ಗಂಧಶಾಲಿಗಳ್ ॥೧೫೫॥

ಬಾಸಣಿಸೆ ಕೆಂಪು ದೆಸೆಯುಂ ।
ಬೀಸುವ ಬನದೆಲರಿನೊಲೆವ ಶಾಲಿವನಂಗಳ್ ॥
ಸೂಸುವ ಪಣಲಿಂ ಮಾಣಿಕ ।
ವಾಸಬೆಗಳುಮಲ್ಲಿ ಬಳೆಪ್ರಮೆನೆ ಕರಮೆಸೆಗುಂ ॥ ॥೧೫೬॥

ಇಡಿದಾಂತು ಫಲದಿನೊಲಗುವ ।
ಕಡು[5]ಗೆಂಪಂ ತಳೆದು ತೊಳಗಿ[5] ನೀಳವ ತೆನೆಯುಂ ॥
ಪಿಡಿವೆಸೆವ್ರುವು ಬೋದಿಗೆಯುಂ ।
ಗಡಿಗೆಯ[6]ನಾಂತಾಂತ[6]ಕಂಭಮೆನೆ ಕುಮುದಂಗಳ್ ॥ ॥೧೫೭॥

---

ಪಾ— 1. ತೂಗದಪಾಂಥಜಾಲವಿಲಸತ್ತೃಷ್ಣಾತುರೊಚ್ಚಿತ್ತ. ಕ॥
2. ಬನದೊಳ್. ಕ॥ 3. ಷ. ಕ॥ ಚ॥ 4. ದಾದಪ್ರು ಕ॥; ರೋಡಪ್ರು ಜ॥ ಚ॥; ರೊಂದಪ್ರು. ಖ॥ 5. ಗಂಪಂತಳೆದು (ತಳೆದ) ತೋಳ್. ಕ॥ ಚ॥
6. ನಾಂತಾತ. ಖ॥; ನಿರದಾಂತ. ಕ॥

ಸುರಕುಜದ ಪಣ್ಣನಿತ್ತಾ |
[1]ದರಿಸೆ ಸುರರ್ ತಮ್ಮ ನೆರೆಯು[1] ಶಾಲಿಯ ತೆನೆಯಂ ||
ಸುರಲೋಕಕ್ಕಡಕುವವ್ರೋ |
ಉರಗಿಳಿಗಳ್ ಕರ್ಚಿ ನಭಕೆ ನೆಗೆವ್ರವು ಸಿಕ್ಕಂ || ||೧೫೮||

ವ|| ಅಂತು ಸೊಗಯಿಸೆ,

ವನತತಿ ವೇಳೆಯೊಳ್ ನೆಗೆದ ನಂದನವುಂ ಸಿಡುತಟ್ಟಿಲಲ್ಲಿ ಮಿ |
ಲ್ಲನೆ ನಡೆಗೊಳ್ವ [2]ತಾವರೆ[2]ಗಳುಜ್ಜ್ವಲಮಪ್ಪ ಮಣಿ[3]ಪ್ರತಾನಮಂ[3] ||
ತೆನೆಗಳ ಪಂತಿ ತೋರದೆರೆ[4]ಯುಂ[4] ಮುಗಿಲಟ್ಟಳೆಯೋಳಿ ತುಂಗಕೇ |
ತನತತಿ [5]ಚೈತ್ರಮುಂ[5] ಪುದಿಮ ಪೊತ್ತಿರೆ ತಾಂ ಕವಿರಾಜಮಲ್ಲನಾ(?)||೧೫೯||

ಇದು ವಿದಿತವಿವಿಧಪ್ರಬಂಧವನವಿಹಾರಪರಿಣತಪರಮಜಿನಚರಣಾರವ್ಯ
[6]ಹೈಮಾ[6]ಚಲೋಚ್ಚಲಿತನಖಮಯೂಖಮಂದಾಕಿನೀಮಜ್ಜನಾಸಕ್ತ
ಸಂತತೋತ್ಸಿಕ್ತದಾನಾಮೋದಮುದಿತ ಬುಧಮಧುಕರಪ್ರಕರ

ಕವಿರಾಜಕುಂಜರ

ವಿರಚಿತಮಪ್ಪ

ಲೀಲಾವತಿಯೊಳ್

ವನವಿಹಾರ ವರ್ಣನಂ

ಷಷ್ಠಾಶ್ವಾಸಂ

ಸಂಪೂರ್ಣಂ.

---

ಪಾ— 1 ದರಿಸಿಸುರರ್‌ತಮ್ಮನೆರೆಯೆ ಜ|| 2. ತಾರಗೆ. ಕ|| ಖ|| ಚ||
3. ಪ್ರಭಾವಮಂ. ಚ|| 4. ಯುಂ. ಚ|| 5 ಛೈತ್ರಮಂ. ಜ||_ಖ||
6. ಹರ್ಮ್ಯ. ಜ||